# ಮುಂಡಕೋಪನ್ಯಾಸಮಂಜರಿ

ಲೇಖಕರು

ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು




ಅಧ್ಯಾತ್ಮಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ - 573211

www.adhyatmaprakasha.org

2009

## ಉಪನಿಷತ್ತುಗಳ ಅಭಿಪ್ರಾಯವನ್ನು ಸರಳವಾದ ತಿಳಿಗನ್ನಡದಲ್ಲಿ ವಿವರಿಸುವ ಮಂಜರಿಗಳು

**1. ಈಶಾವಾಸ್ಯೋಪನ್ಯಾಸಮಂಜರಿ :** ಶ್ರೀಶ್ರೀಗಳವರು 1938ನೆಯ ಸೆಪ್ಟೆಂಬರ್‌ನಿಂದ 1939ನೆಯ ಆಗಸ್ಟ್‌ವರೆಗೆ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ 'ಉಪನಿಷದ್ವಾಕ್ಯ'ಗಳೆಂಬ ಹೆಸರಿನಲ್ಲಿ ಬರೆದಿರುವ ಲೇಖನಗಳನ್ನು ಪರಿಷ್ಕರಿಸಿ ಗ್ರಂಥರೂಪವಾದ ಮಂಜರಿಯಾಗಿ ಹೊರತಂದಿದೆ. ಮೂಲಮಂತ್ರಗಳನ್ನು ಕನ್ನಡದಲ್ಲಿ ಮುದ್ರಿಸಿ ತತ್ತ್ವವನ್ನು ಭಾಷ್ಯಾನುಸಾರವಾಗಿ ಪ್ರತಿಪಾದಿಸಿದೆ. ಈ ಗ್ರಂಥವನ್ನು ಓದಿ ಆಚಾರ್ಯಮುಖೇನ ಮೂಲಭಾಷ್ಯವನ್ನು ಅಧ್ಯಯನಮಾಡಿದರೆ ಹೆಚ್ಚು ಪ್ರಯೋಜನವನ್ನು ಪಡೆಯಬಹುದು. (ಎರಡನೆಯ ಮುದ್ರಣ : 2001, ಪು. ಡೆಮ್ಮಿ 36)

**2. ಕೇನೋಪನ್ಯಾಸಮಂಜರಿ :** ಉಪನಿಷತ್ತಿನ ಸಾರವನ್ನು ಸುಲಭವಾಗಿ ತಿಳಿಯಬೇಕೆನ್ನುವವರಿಗೆ ಮೊದಲು ಮಂಜರಿಯನ್ನು ಓದಿ ಭಾಷ್ಯಾಧ್ಯಯನ ಮಾಡಿದರೆ ಹೆಚ್ಚಿನ ಪ್ರಯೋಜನವಾಗುವದು. ಕನ್ನಡದಲ್ಲಿ ಮೂಲಮಂತ್ರಗಳನ್ನು ಕೊಟ್ಟು ಭಾಷ್ಯಾನುಸಾರವಾಗಿ ತಾತ್ಪರ್ಯವನ್ನು ರೂಪಿಸಿದೆ.
(ನಾಲ್ಕನೆಯ ಮುದ್ರಣ : 2005, ಪು. ಡೆಮ್ಮಿ 54)

**3. ಕಾಠಕೋಪನ್ಯಾಸಮಂಜರಿ :** ಕಾಠಕೋಪನಿಷತ್ತಿನ ವಿವರಣೆಯನ್ನು ಭಾಷ್ಯಾನುಸಾರವಾಗಿ ತಿಳಿಗನ್ನಡದಲ್ಲಿ ಉಪನ್ಯಾಸರೂಪವಾಗಿ ವಿವರಿಸಿದೆ. ಯಮನು ನಚಿಕೇತನಿಗೆ ಉಪದೇಶಿಸಿದ ಆತ್ಮಸ್ವರೂಪ, ಅಧ್ಯಾತ್ಮಯೋಗ – ಇವುಗಳ ಮರ್ಮವನ್ನು ಸುಲಭ ರೀತಿಯಲ್ಲಿ ವರ್ಣಿಸಿದೆ.
(ಮೂರನೆಯ ಮುದ್ರಣ : 2002, ಪು. ಡೆಮ್ಮಿ 280)

**4. ಮುಂಡಕೋಪನ್ಯಾಸಮಂಜರಿ :** ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು ಉಪನಿಷತ್‌ಭಾಷ್ಯಗಳನ್ನೆಲ್ಲ ಕನ್ನಡಿಸಿ ಪ್ರಕಟಿಸಿದ ಮೇಲೂ ತೃಪ್ತರಾಗದೆ ಜಿಜ್ಞಾಸುಳಿಗೆ ಶಾಸ್ತ್ರಾರ್ಥ ವಾದವಿವಾದಗಳು, ಖಂಡನಮಂಡನಗಳ ಗಡಿಬಿಡಿಯಿಲ್ಲದೆ ತಿಳಿಯಾದ ಭಾಷೆಯಲ್ಲಿ ಉಪನಿಷತ್ತುಗಳ ಸಾರವನ್ನು ತಿಳಿಯಿಸಬೇಕೆಂದು ಮಂಜರಿ ಎಂಬ ಹೆಸರಿನ ವಿವರಣರೂಪವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಜಿಜ್ಞಾಸುಗಳು ಶ್ರೀಶಂಕರಭಾಷ್ಯವನ್ನು ಓದುವ ಮೊದಲು ಅಥವಾ ಅಧ್ಯಯನಮಾಡಿದ ಮೇಲೂ ಉಪನಿಷತ್ತಿನ ತಾತ್ಪರ್ಯವನ್ನು ಗ್ರಹಿಸಲು ಈ ಗ್ರಂಥ ಬಹಳ ಸಹಾಯಕವಾಗುತ್ತದೆ.
ಈಗ ಇದು ನಿಮ್ಮ ಕೈಯಲ್ಲಿದೆ. (ನಾಲ್ಕನೆಯ ಮುದ್ರಣ : 2009, ಪು. ಡೆಮ್ಮಿ 96)

**5. ಪ್ರಶ್ನೋಪನ್ಯಾಸಮಂಜರಿ :** ಮುಂಡಕೋಪನಿಷತ್ತಿನ ವಿವರವೆಂದು ಈ ಉಪನಿಷತ್ತನ್ನು ಆಚಾರ್ಯರು ವರ್ಣಿಸಿದ್ದಾರೆ. ಇದರಲ್ಲಿ ಗುರುಶಿಷ್ಯಸಂವಾದರೂಪದಲ್ಲಿ ಪ್ರಾಣನಸ್ವರೂಪ, ಅವತಾರ – ಉತ್ಪತ್ತ್ಯಾದಿಗಳು , ಓಂಕಾರೋಪಾಸನೆ, ಷೋಡಶಕಲಪುರುಷನ ಜ್ಞಾನ – ಇವುಗಳನ್ನು ಬಹಳ ಚೆನ್ನಾಗಿ ವರ್ಣಿಸಿದೆ. ಶ್ರೀಗಳವರು ತಮ್ಮ ಉಪನ್ಯಾಸವಿವರಣೆಯಲ್ಲಿ ಗ್ರಂಥಿಗಳನ್ನೆಲ್ಲ ಬಿಡಿಸಿ ತಿಳಿಸಿದ್ದಾರೆ.
(ಎರಡನೆಯ ಮುದ್ರಣ : 1997, ಪು. ಡೆಮ್ಮಿ 97)

**6. ಮಾಂಡೂಕ್ಯೋಪನ್ಯಾಸಮಂಜರಿ :** ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು 1955ನೇ ಇಸವಿಯಲ್ಲಿ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂದೇಶರೂಪವಾಗಿ ಬರೆದಿದ್ದ ಹನ್ನೆರಡು ಲೇಖನಗಳ ಸಂಗ್ರಹವನ್ನು ಪರಿಷ್ಕರಿಸಿ ಮಂಜರಿಯಾಗಿ ಹೊರತಂದಿದೆ. ಇದರಲ್ಲಿ ಅಡಕವಾಗಿರುವ ಅವಸ್ಥಾತ್ರಯ ಪ್ರಕ್ರಿಯೆಯ ರಹಸ್ಯವು ಸಾಮಾನ್ಯ ಜಿಜ್ಞಾಸುಗಳಿಗೆ ಸರಳವಾಗಿಯೂ, ಶಾಸ್ತ್ರೀಯವಾಗಿಯೂ ಅನುಭವಗಮ್ಯವಾಗಿಯೂ ಪ್ರತಿಪಾದಿಸಿದೆ. ಬಹಳ ಅತ್ಯುತ್ತಮವಾದ ವಿಷಯಗಳನ್ನು ಹೊಂದಿದೆ
(ಮೂರನೆಯ ಮುದ್ರಣ : 2005, ಪು. ಡೆಮ್ಮಿ 106)

ರಕ್ಷಾಕವಚದ 3ನೇ ಪುಟದಲ್ಲಿ ಮುಂದುವರಿದಿದೆ.

ಅಧ್ಯಾತ್ಮಗ್ರಂಥಾವಳಿ

# ಮುಂಡಕೋಪನ್ಯಾಸಮಂಜರಿ

(ಮುಂಡಕೋಪನಿಷತ್ತಿನ
ಶಂಕರಭಾಷ್ಯಾನುಸಾರವಾದ ಸಾರ ಸಂಗ್ರಹ)

ಬರೆದವರು :
ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ : 81

ಪ್ರಕಾಶಕರು :
ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ- 572211
www.adhyatmaprakasha.Org.
2009

**MUNDAKOPANYASA MANJARI -**
Written by **Sri Sri Sachidanadendrasaraswathi Swamigalavaru,**
Published by Adhyatma Prakasha Karyalaya, Public Charitable Trust,
Hole Narasipur - 573211(INDIA)
Phone : 08175-273820 www adhyatmaprakasha.org.

| | | |
|---|---|---|
| ಮೊದಲನೆಯ ಮುದ್ರಣ | 1946 | (1000 ಪ್ರತಿಗಳು) |
| Ist Edition | 1946 | (1000 Copies) |
| ಎರಡನೆಯ ಮುದ್ರಣ | 1974 | (1000 ಪ್ರತಿಗಳು) |
| IInd Edition | 1974 | (1000 Copies) |
| ಮೂರನೆಯ ಮುದ್ರಣ | 1998 | (1000 ಪ್ರತಿಗಳು) |
| IIIrd Edition | 1998 | (1000 Copies) |
| ನಾಲ್ಕನೆಯ ಮುದ್ರಣ | 2009 | (1000 ಪ್ರತಿಗಳು) |
| IVth Edition | 2009 | (1000 Copies) |

ಪುಟಗಳು : 4 + 92

ಬೆಲೆ : ರೂ. 30/-



**ಅಕ್ಷರ ಜೋಡಣೆ :**
ಪ್ರಶಾಂತ್ ಎಂಟರ್‌ಪ್ರೈಸಸ್
ನಂ. 45, 3ನೇ ಮುಖ್ಯರಸ್ತೆ, ಟಿ.ಆರ್.ನಗರ ಪೋಸ್ಟ್
ನಾಗಸಂದ್ರ, ಬೆಂ - 28, ದೂರವಾಣಿ : 26761539

**ಮುದ್ರಣಸ್ಥಾನ :**
ಗಣೇಶ ಮಾರುತಿ ಪ್ರಿಂಟರ್ಸ್
ನಂ. 76, 6ನೇ ಮುಖ್ಯರಸ್ತೆ
3ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028 ✆ 26766342

# ಮೊದಲ ಮಾತು

## (ಮೊದಲನೆಯ ಮುದ್ರಣಕ್ಕೆ)

ಅಧ್ಯಾತ್ಮಪ್ರಕಾಶಪತ್ರಿಕೆಯಲ್ಲಿ 'ಉಪನಿಷದ್ವಾಕ್ಯ' ಎಂಬ ಹೆಸರಿನಿಂದ ಆಗಾಗ್ಗೆ ಕೆಲವು ವಾಕ್ಯಗಳನ್ನು ಬರೆದು ವಿವರಣವನ್ನು ಪ್ರಕಟಿಸುತ್ತಿದ್ದೆನು. ಈ ವಾಕ್ಯಗಳನ್ನು ಕ್ರಮವಾಗಿಯೇ ಬರೆದರೆ ಹೆಚ್ಚು ಉಪಯೋಗಕರವಾಗಿರುವದೆಂದು ಕೆಲವರು ಸೂಚಿಸಿದ್ದರಿಂದ ಈಶ, ಕೇನ, ಮುಂಡಕ – ಈ ಉಪನಿಷತ್ತುಗಳ ವಾಕ್ಯಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುತ್ತ ಬಂದೆನು. ಈಚೆಗೆ ಈ ಬರಹಗಳನ್ನು ಪುಸ್ತಕರೂಪದಲ್ಲಿಟ್ಟರೆ ಓದುವವರಿಗೆ ಒಕ್ಕಡೆಗೆ ಸಿಕ್ಕುವದೆಂದು ಆಲೋಚಿಸಿ ಕೇನ, ಮುಂಡಕ–ಇವುಗಳ ಲೇಖನಗಳನ್ನು ಬೇರೆಯಾಗಿಯೂ ಅಚ್ಚುಮಾಡಿಸಿದೆನು.

ಉಪನಿಷತ್ತಿನ ಭಾಷ್ಯವನ್ನು ಅನುಸರಿಸಿಯೇ ಇಲ್ಲಿ ವಿವರವನ್ನು ಬರೆದಿದೆ ಯಾದರೂ ಸಂಸ್ಕೃತದ ಮೂಲಕ್ಕೆ ಹೊಂದಿಕೊಳ್ಳುವದು, ನಡುನಡುವೆ ಕೆಲ ಕೆಲವು ಚರ್ಚೆಗಳನ್ನು ಮಾಡಿರುವದು – ಮುಂತಾದ ಕಾರಣಗಳಿಂದ ಭಾಷ್ಯವು ಮೊದಲನೆಯ ಸಲಕ್ಕೆ ಓದುವವರಿಗೆ ಸ್ವಲ್ಪ ತೊಡಕಾಗಬಹುದು. ಉಪನಿಷತ್ತಿನ ಭಾವಾರ್ಥ ವೇನೆಂಬುದನ್ನು ತಿಳಿಯುವದಕ್ಕೆ ಈಗ ಪ್ರಕಟವಾಗಿರುವ ಗ್ರಂಥದ ಶೈಲಿಯು ಹೆಚ್ಚಿನ ಸೌಕರ್ಯವನ್ನು ಕಲ್ಪಿಸಿಕೊಡುವದೆಂದು ನನಗೆ ನಂಬಿಕೆಯಿದೆ. ಈ ಬಗೆಯ ಪ್ರತಿಪಾದನೆಯು ಭಾಷ್ಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವದಕ್ಕೂ ಸಾಧಕವಾಗುವ ದೆಂದು ಕೆಲವರು ಅಭಿಪ್ರಾಯಪಟ್ಟಿರುತ್ತಾರೆ.

ಉಪನಿಷತ್ತುಗಳ ಒಟ್ಟರ್ಥವನ್ನು ತಿಳಿಯುವದಕ್ಕೆ ಈ ಉಪನ್ಯಾಸಮಂಜರಿಯಿಂದ ಒಂದಿಷ್ಟಾದರೂ ಸಹಾಯವಾದರೆ ಸದ್ಯದ ಪ್ರಯತ್ನವು ಸಾರ್ಥಕವಾದಂತೆಯೇ ಸರಿ.

1944 —ಗ್ರಂಥಕರ್ತ

## ಬಿನ್ನಹ

ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳು ಬರೆದು ಪ್ರಕಟಿಸಿದ್ದ ಈ ಗ್ರಂಥವು 1974ರಲ್ಲಿ ಎರಡನೆಯಬಾರಿಗೆ ಮತ್ತು 1998ರಲ್ಲಿ ಮೂರನೆಯ ಬಾರಿಗೆ ಪುನರ್ಮುದ್ರಣವಾದ ಮೇಲೆ ಈಚೆಗೆ ಪ್ರತಿಗಳೆಲ್ಲ ಮಾರಾಟವಾಗಿದ್ದು ಜಿಜ್ಞಾಸುಗಳು ಈ ಪುಸ್ತಕವನ್ನು ಅಪೇಕ್ಷಿಸುತ್ತಿದ್ದುದರಿಂದ ಈಗ ನಾಲ್ಕನೆಯ ಬಾರಿಗೆ ಪುನರ್ಮುದ್ರಿಸಿ ಪ್ರಕಟಿಸಲಾಗಿದೆ. ಅಚ್ಚಿನ ತಪ್ಪುಗಳನ್ನು ಸರಿಪರಿಡಿಸಿರುವದನ್ನು ಬಿಟ್ಟರೆ ಮತ್ತೇನೂ ಬದಲಾವಣೆಗಳನ್ನು ಮಾಡಿಲ್ಲ.

ವಾಚಕರು ಎಂದಿನಂತೆ ಈ ಗ್ರಂಥವನ್ನು ಬರಮಾಡಿಕೊಂಡು ಗ್ರಂಥ ಪ್ರಕಟನೆಗೆ ಪ್ರೋತ್ಸಾಹಿಸಬೇಕಾಗಿ ವಿನಂತಿ.

ವಿರೋಧಿ ಸಂವತ್ಸರ ಕಾರ್ತಿಕ ಶುದ್ಧ ಸಪ್ತಮಿ ಪ್ರಕಾಶಕರು

ತಾ|| 25–10–2009

# ವಿಷಯಾನುಕ್ರಮಣಿಕೆ

॥ಓಂ॥

# ಮುಂಡಕೋಪನ್ಯಾಸಮಂಜರಿ

## ಬ್ರಹ್ಮವಿದ್ಯೆಯ ಗುರುಪರಂಪರೆ

ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ
ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ।
ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾ-
ಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ॥1॥

ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾऽಥರ್ವಾ
ತಾಂ ಪುರೋವಾಚಾಙ್ಗಿರೇ ಬ್ರಹ್ಮವಿದ್ಯಾಮ್ ।
ಸ ಭಾರದ್ವಾಜಾಯ ಸತ್ಯವಹಾಯ ಪ್ರಾಹ
ಭಾರದ್ವಾಜೋऽಙ್ಗಿರಸೇ ಪರಾವರಾಮ್ ॥2॥

ಶೌನಕೋ ಹ ವೈ ಮಹಾಶಾಲೋऽಙ್ಗಿರಸಂ ವಿಧಿವದುಪಸನ್ನಃ
ಪಪ್ರಚ್ಛ ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ
ವಿಜ್ಞಾತಂ ಭವತೀತಿ ॥3॥

*"ಬ್ರಹ್ಮನು ದೇವತೆಗಳಲ್ಲೆಲ್ಲ ಪ್ರಧಾನವಾಗಿ ಮೊದಲು ತೋರಿಕೊಂಡನು. ಆತನು ವಿಶ್ವದ ಕರ್ತನು, ಹುಟ್ಟಿದ ಭುವನದ ರಕ್ಷಕನು. ಆ ಬ್ರಹ್ಮನು ತನ್ನ ಹಿರಿಯ ಮಗನಾದ ಅಥರ್ವನಿಗೆ ಎಲ್ಲಾ ವಿದ್ಯೆಗಳೂ ಹೋಗಿನಿಲ್ಲುವ ಸ್ಥಾನವಾದ ಬ್ರಹ್ಮವಿದ್ಯೆಯನ್ನು ಹೇಳಿಕೊಟ್ಟನು. ಅಥರ್ವನಿಗೆ ಬ್ರಹ್ಮನು ಹೇಳಕೊಟ್ಟ ಬ್ರಹ್ಮವಿದ್ಯೆಯನ್ನು ಅಥರ್ವನು ಪೂರ್ವದಲ್ಲಿ ಅಂಗಿರನಿಗೆ ಹೇಳಿದನು; ಅವನು ಭಾರದ್ವಾಜ ಸತ್ಯವಹ ಎಂಬಾತನಿಗೂ, ಭಾರದ್ವಾಜನು ಆ ಪರಾವರವಿದ್ಯೆಯನ್ನು ಅಂಗಿರಸನಿಗೂ ಹೇಳಿದರು. ಅಂಗಿರಸನನ್ನು ಮಹಾಗೃಹಸ್ಥನಾದ ಶೌನಕನು ವಿಧಿವತ್ತಾಗಿ ಸೇವಿಸಿ ಹೀಗೆಂದು ಕೇಳಿದನು: 'ಪೂಜ್ಯರೆ, ಯಾವದನ್ನು ತಿಳಿದುಕೊಂಡರೆ ಇದೆಲ್ಲವೂ ವಿಜ್ಞಾತವಾಗುವದು?' "*

ಅಥರ್ವವೇದದ ಮುಂಡಕೋಪನಿಷತ್ತಿನ ಮೊದಲನೆಯ ಮೂರು ಮಂತ್ರಗಳಿವು. ಇವುಗಳಲ್ಲಿ ಬ್ರಹ್ಮವಿದ್ಯೆಯ ಕೆಲವು ಸಂಪ್ರದಾಯಕರ್ತರನ್ನು ಹೇಳಿರುತ್ತದೆ. ಸಂಪ್ರದಾಯಕರ್ತರೆಂದರೆ ವಿದ್ಯೆಯನ್ನು ತಾವೂ ತಿಳಿದಿದ್ದು ಮತ್ತೊಬ್ಬರಿಗೂ ಹೇಳಿದವರು. ಮೊಟ್ಟಮೊದಲು ದೇವತೆಗಳಲ್ಲೆಲ್ಲ ಹಿರಿಯವನಾದ ಹಿರಣ್ಯಗರ್ಭಬ್ರಹ್ಮನು ಈ

ವಿದ್ಯೆಯನ್ನು ತನ್ನ ಹಿರಿಯಮಗನಾದ ಅಥರ್ವನಿಗೆ ಹೇಳಿಕೊಟ್ಟನು; ಅಥರ್ವನು ಅಂಗಿರನೆಂಬ ಶಿಷ್ಯನಿಗೆ ಹೇಳಿದನು, ಅಂಗಿರನು ಭಾರದ್ವಾಜ–ಸತ್ಯವಹನಿಗೆ ಹೇಳಿದನು. ಹೀಗೆ ಹಿರಣ್ಯಗರ್ಭನಿಂದ ನಾಲ್ಕನೆಯವನಾದ ಭಾರದ್ವಾಜಸತ್ಯವಹನು ಅಂಗಿರಸನೆಂಬಾತನಿಗೆ ಉಪದೇಶಮಾಡಿದನು. ಆ ಅಂಗಿರಸನಿಗೂ ಶೌನಕ ನೆಂಬವನಿಗೂ ನಡೆದ ಸಂವಾದರೂಪವಾದದ್ದೇ ಈ ಮುಂಡಕೋಪನಿಷತ್ತು.

ಉಪನಿಷತ್ತುಗಳಲ್ಲಿ ಗುರುಶಿಷ್ಯಪರಂಪರೆಯನ್ನು ಹೇಳಿರುವದು ಎರಡು ಕಾರಣಗಳಿಂದ. ಬ್ರಹ್ಮವಿದ್ಯೆಯನ್ನು ಧರ್ಮಜ್ಞಾನವೈರಾಗ್ಯೈಶ್ವರ್ಯಸಂಪನ್ನನಾದ ಹಿರಣ್ಯಗರ್ಭನು ಮಾತ್ರ ತನ್ನ ಗುಣವಿಶೇಷಗಳಿಂದ ಬಲ್ಲವನಾಗಿದ್ದನು, ಆದ್ದರಿಂದ ಸರಿಯಾದ ಯೋಗ್ಯತೆಯಿಲ್ಲದವರಿಗೆ ಆ ವಿದ್ಯೆಯು ದಕ್ಕತಕ್ಕದ್ದಲ್ಲ–ಎಂದು ತಿಳಿಸುವದೊಂದು ಉದ್ದೇಶ. ಹಿರಣ್ಯಗರ್ಭನಿಂದ ಅಥರ್ವನು, ಅಥರ್ವನಿಂದ ಅಂಗಿರನು, ಅಂಗಿರನಿಂದ ಭಾರದ್ವಾಜನು, ಭಾರದ್ವಾಜನಿಂದ ಅಂಗಿರಸನು–ಹೀಗೆ ಗುರುಮೂಲಕವಾಗಿಯೇ ವಿದ್ಯೆಯನ್ನು ಹಿಂದಿನ ಮಹಾತ್ಮರೂ ಪಡೆದುಕೊಂಡಿರುವದ ರಿಂದ ಈ ವಿದ್ಯೆಯನ್ನು ನಾವೂ ತತ್ತ್ವಜ್ಞಾನಿಗಳಾದ ಗುರುಗಳಿಂದಲೇ ಅರಿತುಕೊಳ್ಳಬೇಕೆಂದು ತಿಳಿಸುವದು ಮತ್ತೊಂದು ಉದ್ದೇಶ.

ಬ್ರಹ್ಮವಿದ್ಯೆಯು ದೊಡ್ಡವರಿಂದ ಬಂದದ್ದು, ಸದ್ಗುರುಸೇವೆಯೇ ಮುಂತಾದ ಸಾಧನಗಳ ಆಯಾಸದಿಂದಲೇ ಬಂದದ್ದು. ಆದ್ದರಿಂದ ಇದು ಹೆಚ್ಚಿನ ವಿದ್ಯೆಯಾಗಿರ ಬೇಕೆಂದು ಯಾರಿಗಾದರೂ ತೋರಬಹುದು. ಈ ಎರಡು ಕಾರಣಗಳಿಂದಲೇ ಅಲ್ಲದೆ ಈ ವಿದ್ಯೆಯು ತನ್ನ ಸ್ವರೂಪವಿಶೇಷದಿಂದಲೂ ಹೆಚ್ಚಿನದಾಗಿರುತ್ತದೆ; ಏಕೆಂದರೆ ಈ ವಿದ್ಯೆಯು ಸರ್ವವಿದ್ಯೆಗಳಿಗೂ ಕೊನೆಯಾಗಿರುತ್ತದೆ, ಯಾವ ಲೌಕಿಕವಿದ್ಯೆಯನ್ನು ಅರಿತರೂ, ಯಾವ ವೈದಿಕವಿದ್ಯೆಯನ್ನು ಅರಿತರೂ, ತಿಳಿವಳಿಕೆಯು ಕೊನೆಮುಟ್ಟಿತೆಂಬ ಭರವಸೆಯಿಲ್ಲ. ಏಕೆಂದರೆ ತಿಳಿವಳಿಕೆಯು ಯಾವಾಗಲೂ ಹೆಚ್ಚುತ್ತಲೇ ಇರತಕ್ಕ ಸ್ವಭಾವದ್ದಾಗಿರುತ್ತದೆ; ತಿಳಿಯತಕ್ಕ ವಿಷಯಗಳು ಅನಂತವಾಗಿರುವದರಿಂದ ಅವುಗಳನ್ನು ತಿಳಿಸುವ ವಿದ್ಯೆಗಳೂ ಅನಂತವಾಗಿಯೇ ಇರುತ್ತವೆ. ಆದರೆ ಒಂದಾನೊಂದು ವಿದ್ಯೆಯನ್ನು ಅರಿತರೆ ತಿಳಿವಳಿಕೆಯು ತನ್ನ ಪರಮಗತಿಯನ್ನು ಮುಟ್ಟಿದಂತಾಗಿಬಿಡುತ್ತದೆ. ಅದರ ಮುಂದೆ ಮತ್ತೇನೂ ತಿಳಿಯತಕ್ಕದ್ದು ಇರುವದೇ ಇಲ್ಲ. ಅದೇ ಬ್ರಹ್ಮವಿದ್ಯೆಯು. ಬ್ರಹ್ಮವೆಂದರೇನೆಂದು ತಿಳಿಯದೆ ಅನೇಕರು ಶಬ್ದಮಾತ್ರದಿಂದಲೇ ಬೆಚ್ಚಿಬೀಳುವರು. ಆದರೆ ಅಂಥ ಅಂಜಿಕೆಗೇನೂ ನಿಜವಾದ ಕಾರಣವಿರುವದಿಲ್ಲ. ಅರಿಯಬೇಕಾದದ್ದೆಲ್ಲದರ ಪರಮಾರ್ಥವನ್ನೇ ಬ್ರಹ್ಮ ಎಂದು ವೇದಾಂತದಲ್ಲಿ ಕರೆದಿರುತ್ತದೆ. ಅರಿತುಕೊಳ್ಳ ಬೇಕಾಗಿರುವದೆಲ್ಲವನ್ನೂ ಅರಿತುಕೊಂಡ ಮೇಲೆ ಇನ್ನೇನೂ ಅರಿಯಬೇಕಾಗಿರುವದಿಲ್ಲ ವೆಂಬುದು ತಾನೇ ಸಿದ್ಧವಾಗಿರುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯನ್ನು ತಿಳಿದುಕೊಂಡರೆ ಎಲ್ಲಾ

ವಿದ್ಯೆಗಳೂ ತಮ್ಮ ಮಜಲು ಮುಟ್ಟಿದಂತೆ ಆಯಿತು. ವಿದ್ಯೆಗಳು ಬೇರೆಬೇರೆಯ ವಿಷಯವನ್ನು ಪ್ರತಿಪಾದಿಸುವಂತೆ ನಮಗೆ ಕಾಣುತ್ತಿರುವದು ನಿಜ. ಆದರೆ ಬ್ರಹ್ಮವಿದ್ಯೆಯ ವಿಷಯದಲ್ಲಿ ಅಡಕವಾಗದೆ ಇರುವ ವಿಷಯವೇ ಇಲ್ಲ; ಏಕೆಂದರೆ ಎಲ್ಲದರ ತಿರುಳನ್ನೇ ಬ್ರಹ್ಮವೆಂದು ನಾವು ಕರೆದಿರುತ್ತೇವೆ. ಆದ್ದರಿಂದ ಬ್ರಹ್ಮವನ್ನು ಅರಿತುಕೊಂಡಮೇಲೆ ಅರಿಯುವ ಇಚ್ಛೆಯೆಲ್ಲವೂ ಪರಿಸಮಾಪ್ತವಾಗಿಬಿಡುತ್ತದೆ. ಹೀಗೆ ಎಲ್ಲಾ ವಿದ್ಯೆಗಳೂ ಹೇಳುವ ಬೇರೆಬೇರೆ ವಿಷಯಗಳ ತಿರುಳಾದ ಬ್ರಹ್ಮವನ್ನೇ ತಿಳಿಸಿಕೊಡುವದರಿಂದ ಈ ವಿದ್ಯೆಯು ಸರ್ವವಿದ್ಯಾಪ್ರತಿಷ್ಠೆಯು. ಎಲ್ಲಾ ವಿದ್ಯೆಗಳ ನಿಲ್ದಾಣವು—ಎಂದು ಇದರ ಹೆಚ್ಚುಗಾರಿಕೆಯನ್ನು ತಿಳಿಸಿರುತ್ತದೆ. ಈ ವಿದ್ಯೆಯು ಪರಾವರವಿದ್ಯೆ; ಎಂದರೆ ಹೆಚ್ಚಿನ ವಿಷಯವೂ ಕಡಿಮೆಯ ವಿಷಯಗಳೂ—ಎಲ್ಲವೂ ಈ ವಿದ್ಯೆಯಿಂದ ಅರಿತಂತೆ ಆಗುತ್ತವೆ. ಇದೇ ಬ್ರಹ್ಮವಿದ್ಯೆಯ ಹಿರಿಮೆ.

ಈ ವಿದ್ಯೆಯನ್ನು ತಿಳಿಯುವದಕ್ಕೆ ಬಂದಿರುವ ಶೌನಕನೆಂಬಾತನು ಮಹಾಗೃಹಸ್ಥನು. ಗೃಹಸ್ಥನಿಗೆ ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡುವದು, ಮಿಕ್ಕ ಆಶ್ರಮಗಳಲ್ಲಿರುವವರನ್ನು ಆದರಿಸುವದು—ಈ ಎರಡು ದೊಡ್ಡ ಹೊಣೆಗಾರಿಕೆಗಳಿರುವವು. ಶಾಸ್ತ್ರವು ಗೃಹಸ್ಥನಿಗೆ ಇಷ್ಟೊಂದು ಹೊಣೆಗಾರಿಕೆಯನ್ನು ಕೊಟ್ಟಿರುವದರಿಂದ ಅವನಿಗೆ ಎಲ್ಲರಿಗಿಂತಲೂ ಹೆಚ್ಚಿನ ಪುರುಷಾರ್ಥವನ್ನು ಕೊಡುವದೆಂದು ನಾವು ನಿರೀಕ್ಷಿಸಬಹುದಾಗಿದೆ. ವೇದದಲ್ಲಿ ಕರ್ಮವನ್ನು ಮಾಡುವವರಿಗೆ ಸ್ವರ್ಗವೆಂಬ ಮಹಾಫಲವನ್ನು ಹೇಳಿಯೂ ಇರುತ್ತದೆ. ಹೀಗಿದ್ದರೂ ಮಹಾಗೃಹಸ್ಥನಾಗಿ ಅತ್ಯುತ್ಕೃಷ್ಟಫಲಕ್ಕೆ ಭಾಗಿಯಾಗಿರುವ ಶೌನಕನು ಅಂಗಿರಸನ ಬಳಿಗೆ ಬಂದು ಬ್ರಹ್ಮವಿದ್ಯೆಯನ್ನು ಕೇಳಿರುತ್ತಾನೆ. ಕರ್ಮಮಾತ್ರದಿಂದ ಸಿಕ್ಕದೆ ಇರುವ ಯಾವದೋ ಒಂದು ಮಹಾಫಲವು ಬ್ರಹ್ಮವಿದ್ಯೆಗೆ ದೊರಕುವದೆಂದು ಇದರಿಂದಲೇ ಸೂಚಿತವಾಗುತ್ತದೆ. ಇದಕ್ಕೆ ತಕ್ಕಂತೆ ಬ್ರಹ್ಮವಿದ್ಯೆಗೇ ಮೋಕ್ಷವೆಂಬ ಪರಮಪುರುಷಾರ್ಥವು ಫಲವಾಗಿರುವದೆಂದು ಮುಂದೆ ಈ ಉಪನಿಷತ್ತಿನಲ್ಲಿ ಹೇಳಿಯೂ ಇರುತ್ತದೆ.

ಶೌನಕನು ಕೇಳಿದ ಪ್ರಶ್ನೆಯೂ ಬ್ರಹ್ಮವಿದ್ಯೆಯ ಅಸಾಧಾರಣವಿಷಯವನ್ನು ತಿಳಿಸುತ್ತದೆ. "ಪೂಜ್ಯರೆ, ಯಾವದೊಂದನ್ನು ತಿಳಿದರೆ ಇದೆಲ್ಲವನ್ನೂ ತಿಳಿದಂತೆ ಆಗುತ್ತದೆ?" ಎಂದು ಆತನು ಕೇಳಿರುತ್ತಾನೆ. ಒಂದನ್ನು ತಿಳಿದರೆ ಮತ್ತೊಂದನ್ನು ತಿಳಿದಂತೆ ಎಂದಿಗೂ ಆಗುವದಿಲ್ಲವೆಂದು ಎಲ್ಲರಿಗೂ ಗೊತ್ತೇ ಇರುತ್ತದೆ; ಆದರೂ ಯಾವದೊಂದನ್ನು ತಿಳಿದರೆ ಮತ್ತೆಲ್ಲವನ್ನೂ ತಿಳಿದಂತೆ ಆಗುತ್ತದೆ?—ಎಂದು ಶೌನಕನು ಕೇಳಿರುತ್ತಾನೆ. ಇದಕ್ಕೆ ಕಾರಣವೇನೆಂದರೆ ಬ್ರಹ್ಮವಿದ್ಯೆಯ ವಿಷಯವು ಮಿಕ್ಕ ವಿದ್ಯೆಗಳ ವಿಷಯಗಳ ಜೊತೆಗೆ ತಾನೂ ಒಂದಲ್ಲ; ಅದು ಅವುಗಳೆಲ್ಲದರ ತಿರುಳಾಗಿರುತ್ತದೆ. ಜಗತ್ತಿಗೆಲ್ಲ ತಿರುಳಾದ ತತ್ತ್ವವೊಂದು ಇದೆ, ಅದೊಂದನ್ನೇ ನಾವು ಈಗ ಜಗತ್ತೆಂದು ವ್ಯವಹರಿಸುತ್ತಿದ್ದೇವೆ.

ಈ ಜಗತ್ತು ಬಗೆಬಗೆಯ ದೃಶ್ಯವಿಶೇಷಗಳಿಂದ ಕೂಡಿರುತ್ತದೆ. ಆದರೆ ಈ ವಿಶೇಷಗಳು ತಾವುತಾವೇ ಬೇರೆಯಾಗಿರುವದಿಲ್ಲ. ಆ ಪರಮಾರ್ಥವನ್ನೇ ನಾವು ಇವುಗಳ ರೂಪದಲ್ಲಿ ಅರಿಯುತ್ತಿದ್ದೇವೆ. ಈಗಿನ ಇವುಗಳ ರೂಪದಲ್ಲಿ ನಮ್ಮ ಅರಿವಿಗೆ ನೆಲೆಯೇ ಇಲ್ಲ; ಎಷ್ಟು ದೃಶ್ಯಗಳನ್ನು ಎಷ್ಟುಮಟ್ಟಿಗೆ ಅರಿತರೂ ನಮ್ಮ ತಿಳಿವಳಿಕೆಗೆ ಅಂತವಾಗುವದಿಲ್ಲ. ಆದರೆ ಇದೆಲ್ಲಕ್ಕೂ ತಿರುಳಾದ ತತ್ತ್ವವೊಂದುಂಟು. ಗಾಳಿಯ ಪಟದ ಜೊತೆಯಲ್ಲಿ ಬಾಲಂಗಸವೂ ಬರುವಂತೆ, ಅಥವಾ ಹಗ್ಗವನ್ನರಿತರೆ ಅವುಗಳಲ್ಲಿ ನಾವು ಹುಟ್ಟುಗಟ್ಟಿಕೊಂಡಿರುವ ಹಾವೇ ಮುಂತಾದ ತೋರಿಕೆಗಳ ತತ್ತ್ವವೆಲ್ಲವನ್ನೂ ಅರಿತಂತಾಗುವಂತೆ ಈ ತತ್ತ್ವವನ್ನು ಅರಿತುಕೊಂಡರೆ ನಾವು ನೋಡುತ್ತಿರುವದೆಲ್ಲದರ ನಿಜವನ್ನೂ ಅರಿತಂತೆ ಆಗುತ್ತದೆ–ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಿರುತ್ತಾರೆ. ಈ ಮಾತು ಶೌನಕನ ಕಿವಿಗೂ ಬಿದ್ದಿತ್ತು. ಆದರೆ ಆ ತತ್ತ್ವವೆಂಬುದು ಯಾವದೆಂದು ಮಾತ್ರ ಅವನಿಗೆ ತಿಳಿದಿರಲಿಲ್ಲ. ಆದ್ದರಿಂದ ''ಪೂಜ್ಯರೆ. ಯಾವದನ್ನರಿತುಕೊಂಡರೆ ಇದೆಲ್ಲವನ್ನೂ ಅರಿತುಕೊಂಡಂತಾಗುತ್ತದೆ?'' ಎಂದು ಕೇಳಿರುತ್ತಾನೆ.

ಬ್ರಹ್ಮವಿದ್ಯೆಗೆ ಯಾರು ಅಧಿಕಾರಿಗಳು? ಯಾರಿಗೆ ಇಷ್ಟಿಷ್ಟು ಜ್ಞೇಯಭಾಗವನ್ನು ತಿಳಿದುಕೊಂಡರೆ ಸಾಕೆಂಬ ಅಲ್ಪತೃಪ್ತಿಯಿಲ್ಲವೋ, ಯಾರಿಗೆ ಇಡಿಯ ದೃಶ್ಯರಾಶಿಯ ತಿರುಳನ್ನೇ ಕಂಡುಕೊಳ್ಳಬೇಕೆಂಬ ಆಶೆಯಿರುವದೋ, ಅವರೇ ಈ ವಿಚಾರಕ್ಕೆ ತಕ್ಕವರು. ಕೆಲವು ಜನರಿಗೆ ಹೊಟ್ಟೆ–ಬಟ್ಟೆ, ಹೆಂಡಿರು–ಮಕ್ಕಳು, ಮನೆ–ಮಠ, ಹಣ–ಕಾಸು–ಇಷ್ಟು ವಿಷಯಗಳ ತಿಳಿವಳಿಕೆಯೇ ಸಾಕಾಗಿರುತ್ತದೆ. ಮತ್ತೆ ಕೆಲವರಿಗೆ ವಿದ್ಯೆ, ಅಧಿಕಾರ, ಕೀರ್ತಿ–ಮುಂತಾದವುಗಳೂ ಬೇಕಾಗಿರುತ್ತವೆ; ಎಲ್ಲಿಯೋ ಕೆಲವರಿಗೆ ಮಾತ್ರ ಈ ಜನ್ಮದಲ್ಲಿಯೇ ಅಲ್ಲದೆ ಲೋಕಾಂತರದಲ್ಲಿಯೂ ಜನ್ಮಾಂತರದಲ್ಲಿಯೂ ತಮಗೆ ಸುಖವಾಗಬೇಕೆಂದೂ ದುಃಖವು ಆಗಲೇಬಾರದೆಂದೂ ಹಂಬಲಿಕೆಯಿರುತ್ತದೆ. ಅವರವರು ತಮ್ಮ ತಮ್ಮ ಬಯಕೆಗೆ ತಕ್ಕಂತೆ ಪ್ರಯತ್ನವನ್ನು ಮಾಡುತ್ತಾರೆ, ಪ್ರಯತ್ನಕ್ಕೆ ತಕ್ಕಂತೆ ಫಲವನ್ನೂ ಹೊಂದುತ್ತಾರೆ. ಆದರೆ ಯಾರಿಗೆ ಈ ಲೋಕದ ಅಥವಾ ಪರಲೋಕದ, ಈ ಜನ್ಮದ ಅಥವಾ ಮುಂದಿನ ಜನ್ಮದ ಕೆಲವು ವಿಷಯಗಳ ಖಂಡಜ್ಞಾನವಾಗಲಿ ಖಂಡಸುಖವಾಗಲಿ ಸಿಕ್ಕಿದರೆ ಸಾಲದೆಂದು ತೋರುವದೋ, ಅಥವಾ ಈ ಎಲ್ಲಾ ಬಗೆಯ ಜ್ಞಾನಗಳಿಗಿಂತಲೂ ಹೆಚ್ಚಿನದಾಗಿರುವ ಅಖಂಡಪರಮಾರ್ಥವನ್ನೇ ತಿಳಿದು ತಮ್ಮ ಜಿಜ್ಞಾಸೆಗೆ ತೃಪ್ತಿಯನ್ನು ಉಂಟುಮಾಡಿಕೊಳ್ಳಬೇಕೆಂಬ ಹವಣಿಕೆಯಿರುವದೋ, ಅಂಥ ಪುರುಷಧೌರೇಯರೇ ಬ್ರಹ್ಮವಿದ್ಯೆಗೆ ಅಧಿಕಾರಿಗಳು. ಅಂಥವರೇ ಶೌನಕನು ಕೇಳಿರುವ ಪ್ರಶ್ನೆಯಲ್ಲಿ ಕುತೂಹಲವನ್ನು ಹೊಂದಿ, ಈ ಪ್ರಶ್ನೆಗೆ ನಿಜವಾದ ಉತ್ತರವನ್ನು ಕಂಡುಕೊಳ್ಳಬೇಕೆಂದು ಹವಣಿಸುವರು.



# 2. ಪರಾಪರವಿದ್ಯೆಗಳು

**ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ**
**ಯದ್ ಬ್ರಹ್ಮವಿದೋ ವದನ್ತಿ ಪರಾ ಚೈವಾಪರಾ ಚ ॥4॥**

**ತತ್ರಾಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ**
**ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛನ್ದೋ ಜ್ಯೋತಿಷಮಿತಿ ।**
**ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ॥5॥**

*"ಅವನಿಗೆ ಆತನು ಹೇಳಿದ್ದೇನೆಂದರೆ: ಎರಡು ವಿದ್ಯೆಗಳು ತಿಳಿಯತಕ್ಕವು ಎಂದು ಬ್ರಹ್ಮವೇತ್ತರು ಹೇಳುತ್ತಾರೆ; ಪರವಿದ್ಯೆ, ಅಪರವಿದ್ಯೆ–ಇವೇ ಆ ಎರಡು. ಅವುಗಳಲ್ಲಿ ಅಪರವಿದ್ಯೆಯೆಂದರೆ ಋಗ್ವೇದವು, ಯಜುರ್ವೇದವು, ಸಾಮವೇದವು, ಅಥರ್ವವೇದವು, ಶಿಕ್ಷೆ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ–ಇವು. ಇನ್ನು ಪರವಿದ್ಯೆ ಎಂದರೆ ಯಾವದರಿಂದ ಆ ಅಕ್ಷರವನ್ನು ಅರಿಯಲಾಗುವದೋ ಅದು."*

**ಶೌನಕನು ಕೇಳಿದ ಪ್ರಶ್ನೆಯು ಅತಿಮಹತ್ತ್ವದ್ದು. ಯಾವದೊಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆ ಆದೀತು?–ಎಂಬುದೇ ಅವನ ಪ್ರಶ್ನೆ. ಈ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಸಾಮಾನ್ಯವಾದ ಲೌಕಿಕತಿಳಿವಳಿಕೆಯು ಸಾಲದೆಂಬುದು ಸ್ಪಷ್ಟವಾಗಿದೆ. ಲೋಕದಲ್ಲಿ ಎಷ್ಟು ಶಾಸ್ತ್ರಗಳಿದ್ದರೂ ಅವುಗಳಿಗೆ ಒಂದೊಂದಕ್ಕೂ ಒಂದೊಂದು ಗೊತ್ತಾದ ವಿಷಯವು ಇದ್ದುಬಿಡುತ್ತದೆ. ಆದ್ದರಿಂದ ಅವುಗಳು ಪ್ರಕೃತದ ವಿಚಾರಕ್ಕೆ ನೇರಾಗಿ ಉಪಕಾರವಾಗಲಾರವೆಂಬುದನ್ನು ಹೇಳಬೇಕಾದದ್ದೇ ಇಲ್ಲ.**

**ಇನ್ನು ಎಲ್ಲಾ ಶಾಸ್ತ್ರಗಳ ಉದ್ಗಮಸ್ಥಾನವಾದ ವೇದವನ್ನು ತೆಗೆದುಕೊಂಡರೆ ಅದರಲ್ಲಿಯೂ ಎರಡು ಪಂಗಡವನ್ನು ಮಾಡಬೇಕಾಗುತ್ತದೆ. ಹೇಗೆಂದರೆ ವೇದವು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ–ಎಂದು ನಾಲ್ಕು ಬಗೆಯಾಗಿರುತ್ತದೆ. ಈ ವೇದದಲ್ಲಿ ಹೇಳಿರುವ ಕರ್ಮಗಳನ್ನು ಮಾಡಿ ಆಯಾ ಫಲಗಳನ್ನು ಪಡೆಯಬಹುದು. ಆದರೆ ಅದರ ಅರ್ಥವನ್ನು ಮಾಡಿಕೊಳ್ಳಬೇಕಾದರೆ ಶಬ್ದೋಚ್ಚಾರಣೆಯನ್ನು ತಿಳಿಸುವ ಶಿಕ್ಷೆ, ಶಬ್ದಗಳ ಪ್ರಕೃತಿ ಪ್ರತ್ಯಯಾದಿವಿಭಾಗವನ್ನು ತಿಳಿಸುವ ವ್ಯಾಕರಣ, ಮಂತ್ರಗಳ ಛಂದಸ್ಸನ್ನು ತಿಳಿಸುವ ಛಂದಶ್ಶಾಸ್ತ್ರ, ಪದಗಳ ವ್ಯುತ್ಪತ್ತಿಯನ್ನೂ ಅರ್ಥವನ್ನೂ ತಿಳಿಸುವ ನಿರುಕ್ತ–ಇವುಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಅರ್ಥವನ್ನು**

ತಿಳಿದುಕೊಂಡಮೇಲೂ ಕರ್ಮವನ್ನು ಮಾಡುವ ಬಗೆಯನ್ನು ವಿವರಿಸುವ ಕಲ್ಪ, ಕಾಲವೇ ಮುಂತಾದದ್ದನ್ನು ತಿಳಿಸುವ ಜ್ಯೋತಿಷ–ಇವನ್ನೂ ತಿಳಿದುಕೊಳ್ಳಬೇಕಾಗುತ್ತದೆ. ಈ ಶಾಸ್ತ್ರಗಳ ಸಹಾಯವೆಲ್ಲ ದೊರಕಿದರೆ ವೇದದ ಅರ್ಥವನ್ನು ತಿಳಿದುಕೊಂಡು ಅಧಿಕಾರಿಯಾದವನು ಕರ್ಮವನ್ನು ಮಾಡಿ ವೇದದಲ್ಲಿ ಹೇಳಿರುವ ಕರ್ಮಫಲಗಳನ್ನು ಪಡೆದುಕೊಳ್ಳುವೆನೆಂದು ನಂಬಬಹುದು. ಇದೆಲ್ಲವೂ ವೇದವಿದ್ಯೆಯಲ್ಲಿ ಮೊದಲನೆಯ ಭಾಗವಾದ ಅಪರವಿದ್ಯೆ (ಕೀಳುವಿದ್ಯೆ)ಗೆ ಸೇರಿದ ಭಾಗವು.

ಅಪರವಿದ್ಯೆಯಲ್ಲಿ ಕರ್ಮವು ಮಾತ್ರವೇ ಅಡಕವಾಗಿರುವದಿಲ್ಲ, ಅದರಲ್ಲಿ ಉಪಾಸನೆಯೂ ಸೇರಿರುತ್ತದೆ. ಅದಕ್ಕೂ ವೇದದ ಅಧ್ಯಯನವು ಬೇಕಾಗುತ್ತದೆ, ಅರ್ಥದ ಜ್ಞಾನವು ಬೇಕಾಗುತ್ತದೆ; ಆಮೇಲೆ ವೇದೋಕ್ತರೀತಿಯಲ್ಲಿ ಅಧಿಕಾರಿಯು ಉಪಾಸನೆಮಾಡಬೇಕಾಗುತ್ತದೆ. ಮೇಲೆ ಹೇಳಿದ ಕರ್ಮವೆಂಬುದು ಹೊರಗಿನ ವಾಕ್ಕಾಯಗಳ ವ್ಯಾಪಾರವು, ಉಪಾಸನೆಯು ಒಳಗಿನ ಮನಸ್ಸಿನ ವ್ಯಾಪಾರವು, ಇಷ್ಟು ತಾರತಮ್ಯವನ್ನು ಬಿಟ್ಟರೆ ಎರಡನ್ನೂ ಕರ್ಮವೆಂದೇ ಕರೆಯಬಹುದಾಗಿರುತ್ತದೆ. ಯಾವಯಾವದನ್ನು ಮಾಡುವದಕ್ಕೂ, ಬಿಡುವದಕ್ಕೂ ಅಥವಾ ಬೇರೆ ರೀತಿಯಲ್ಲಿಯೇ ಮಾಡುವದಕ್ಕೂ ಪುರುಷನಿಗೆ ಸ್ವಾತಂತ್ರ್ಯವಿರುವದೋ ಅದೆಲ್ಲವೂ–ಕಾಯಿಕವಾಗಲಿ, ವಾಚಿಕವಾಗಲಿ, ಮಾನಸಿಕವಾಗಲಿ–ಕರ್ಮವೇ. ಅಂತೂ ಈ ಎರಡು ಬಗೆಯ ಕರ್ಮವನ್ನು ತಿಳಿಸುವ ವೇದವಿದ್ಯೆಯು ಅಪರವಿದ್ಯೆಯೆನಿಸುತ್ತದೆ.

ಇನ್ನು ಪರವಿದ್ಯೆ ಎಂಬ ಹೆಚ್ಚಿನ ವಿದ್ಯೆಯ ವಿಚಾರಕ್ಕೆ ಹೊರಡೋಣ. ಅದೇ ಶೌನಕನು ಕೇಳಿದ ವಿದ್ಯೆ. ಏಕೆಂದರೆ ಪರವಿದ್ಯೆಯಿಂದ ನಾಶರಹಿತವಾದ ಅಕ್ಷರವೆಂಬ ಪರವಸ್ತುವನ್ನೂ ಅರಿತುಕೊಳ್ಳಬಹುದಾಗಿರುತ್ತದೆ. ಹಿಂದೆ ಹೇಳಿದ ವೇದದಲ್ಲಿಯೇ ಈ ವಿದ್ಯೆಯೂ ಅಡಕವಾಗಿರುತ್ತದೆ. ಆದರೆ ಅಪರವಿದ್ಯೆಗೆ ಅಧ್ಯಯನವು ಮುಖ್ಯವಾಗಿರುತ್ತದೆ; ಇಡಿಯ ವೇದವನ್ನು ಅಧ್ಯಯನಮಾಡುವದೆಂಬುದೂ ಅಪರವಿದ್ಯೆಯಲ್ಲಿ ಸೇರಿರುತ್ತದೆ. ಆದರೆ ಪರವಿದ್ಯೆಯೆಂದರೆ ಹಾಗಲ್ಲ, ಅದು ಬರಿಯ ತಿಳಿವಳಿಕೆ. ಆ ತಿಳಿವಳಿಕೆಗೂ ವೇದವೇ ಮೂಲವಾಗಿದ್ದರೂ ಆ ತಿಳಿವಳಿಕೆಯುಂಟಾದರೆ ಪರವಿದ್ಯೆಯಾಗಿಬಿಡುತ್ತದೆ. ಉದಾಹರಣೆಗೆ ವಾಮದೇವನೆಂಬ ಋಷಿಯು ಇನ್ನೂ ಗರ್ಭದಲ್ಲಿರುವಾಗಲೇ ಈ ತಿಳಿವಳಿಕೆಯು ಅವನಿಗೆ ಬಂತೆಂದು ಒಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ. ಗರ್ಭದಲ್ಲಿ ಅಧ್ಯಯನವನ್ನೇನೂ ಆತನು ಮಾಡಿರಲಿಲ್ಲ; ಆದರೂ ಆತನಿಗೆ ಪರವಿದ್ಯೆಯೆಂಬ ಈ ತಿಳಿವಳಿಕೆಯುಂಟಾಯಿತು. ಹೆಂಗಸರಿಗಾಗಲಿ ಗಂಡಸರಿಗಾಗಲಿ ಈ ವಿದ್ಯೆಯು ಈ ತಿಳಿವಳಿಕೆಯು, ಯಾರಿಗೆ, ಯಾವಾಗ, ಎಲ್ಲಿ ಉಂಟಾಗುವದೋ ಅವರಿಗೆ ಆಗಲೇ, ಅಲ್ಲಿಯೇ, ಪರವಿದ್ಯೆಯ ಫಲವು ಕೈಸೇರಿಬಿಡುತ್ತದೆ.

ಆ ಅಕ್ಷರವು ಹೇಗಿರುವದು? ಅದರ ತಿಳಿವಳಿಕೆಯು ಹೇಗೆ ಆಗಬೇಕು?–ಎಂದರೆ:

ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ
ತದಾಪಾಣಿಪಾದಮ್ ।
ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ
ತದವ್ಯಯಂ ಯದ್ ಭೂತಯೋನಿಂ ಪರಿಪಶ್ಯನ್ತಿ ಧೀರಾಃ ॥6॥

''ಕಾಣುವದಲ್ಲದೆ, ಹಿಡಿತಕ್ಕೆ ಸಿಕ್ಕುವದಲ್ಲದೆ, ಗೋತ್ರವಿಲ್ಲದೆ, ವರ್ಣವಿಲ್ಲದೆ, ಚಕ್ಷುಃಶ್ರೋತ್ರಗಳಿಲ್ಲದೆ, ಕೈಕಾಲುಗಳಿಲ್ಲದೆ, ನಿತ್ಯವಾಗಿ, ವಿಭುವಾಗಿ, ಸರ್ವಗತವಾಗಿ, ಅತಿಸೂಕ್ಷ್ಮವಾಗಿ, ಅವ್ಯಯವಾಗಿ, ಭೂತಗಳಿಗೆ ಕಾರಣವಾಗಿರುವ ಅದನ್ನು ವಿವೇಕಿಗಳು ಮಾತ್ರ ಕಾಣುವರು.''

ಎಂದೆಂದಿಗೂ ನಾಶವಾಗದ ತತ್ತ್ವವೊಂದಿದೆ; ಅದಕ್ಕೇ ಅಕ್ಷರವೆಂದು ಹೆಸರು, ಅದಕ್ಕೇ ಬ್ರಹ್ಮವೆಂದೂ ಹೆಸರು. ಅಕ್ಷರವಿದ್ಯೆಯೆಂದರೂ ಬ್ರಹ್ಮವಿದ್ಯೆಯೆಂದರೂ ಒಂದೇ. ಅದನ್ನು ತಿಳಿದುಕೊಳ್ಳುವದೇ ಪರವಿದ್ಯೆ.

ಆ ತತ್ತ್ವದ ಸ್ವರೂಪವೇನು? ಅದು ಅದೃಶ್ಯವಾಗಿರುತ್ತದೆ. ಯಾವ ಜ್ಞಾನೇಂದ್ರಿಯಕ್ಕೂ ಕಾಣತಕ್ಕದ್ದಲ್ಲ. ಅದನ್ನು ಮುಟ್ಟುವದಕ್ಕಾಗುವದಿಲ್ಲ, ಮೂಸುವಕ್ಕಾಗುವದಿಲ್ಲ, ಸದ್ದುಕೇಳುವದಕ್ಕಾಗುವದಿಲ್ಲ, ಕಣ್ಣಿಂದ ನೋಡುವದಕ್ಕಾಗುವದಿಲ್ಲ, ನಾಲಗೆಯಿಂದ ಸವಿಯುವದಕ್ಕೂ ಆಗುವದಿಲ್ಲ. ಇದರಂತೆ ಅದು ಹಿಡಿತಕ್ಕೆ ಸಿಕ್ಕುವದಲ್ಲ; ಯಾವ ಕರ್ಮೇಂದ್ರಿಯಕ್ಕೂ ಗೋಚರವಾಗುವದಲ್ಲ, ಅದು ಕಾಲಿನಿಂದ ನಡೆಯತಕ್ಕದ್ದಲ್ಲ, ಕೈಯಿಂದ ಹಿಡಿಯತಕ್ಕದ್ದಲ್ಲ, ಒಳಕ್ಕೆ ತೆಗೆದುಕೊಳ್ಳುವದಲ್ಲ, ಹೊರಕ್ಕೆ ಬಿಡತಕ್ಕದ್ದಲ್ಲ ಮಾತಿನಿಂದ ಆಡಿ ತಿಳಿಸುವದೂ ಅಲ್ಲ. ಅದಕ್ಕೆ ಗೋತ್ರವಿಲ್ಲ; ಮಡಕೆಕುಡಿಕೆಗಳನ್ನು ಮಣ್ಣಿನ ಮೂಲದಿಂದಲೂ ಮರಗಿಡಗಳನ್ನು ಕಟ್ಟಿಗೆಯ ಮೂಲದಿಂದಲೂ ಕಡಗ, ಕಿವಿಯೊಂಟಿ–ಮುಂತಾದವುಗಳನ್ನು ಚಿನ್ನದ ಮೂಲದಿಂದಲೂ ಅರಿಯುವಂತೆ ಅದನ್ನು ಯಾವದೊಂದು ಮೂಲದಿಂದಲೂ ಕಂಡುಕೊಳ್ಳುವದಕ್ಕೆ ಆಗುವಹಾಗಿಲ್ಲ. ಅದಕ್ಕೆ ವರ್ಣಗಳಿಲ್ಲ; ಅದನ್ನು ದಪ್ಪ, ಸಣ್ಣ–ಎಂದಾಗಲಿ ಕರ್‍ರಗೆ, ಬೆಳ್ಳಗೆ–ಎಂದಾಗಲಿ ವರ್ಣಿಸಿ ಹೇಳುವದಕ್ಕೆ ಆಗುವದಿಲ್ಲ. ಅದಕ್ಕೆ ಹೊರಗಿನ ನಾಮರೂಪಗಳನ್ನು ಅರಿಯುವ ಜ್ಞಾನೇಂದ್ರಿಯಗಳಾಗಲಿ ಬಳಸುವ ಕರ್ಮೇಂದ್ರಿಯಗಳಾಗಲಿ ಇರುವದಿಲ್ಲ, ಅಂತೂ ಅದು ಗ್ರಾಹ್ಯವಲ್ಲ, ಗ್ರಾಹಕವಲ್ಲ; ಒಂದಕ್ಕೆ ವಿಷಯವಲ್ಲ, ಒಂದನ್ನು ವಿಷಯವಾಗಿರಿಸಿಕೊಳ್ಳುವದೂ ಅಲ್ಲ. ಇಂಥ ವಿಚಿತ್ರವಾದ ವಸ್ತುವದು!

''ಹಾಗಾದರೆ ಅದನ್ನು ಯಾರೂ ಅರಿತುಕೊಳ್ಳುವ ಸಂಭವವೇ ಇಲ್ಲವೆಂದು ಕಾಣುತ್ತದೆ, ಅದು ಇಲ್ಲವೇ ಇಲ್ಲವೆಂದೂ ಹೇಳಬಹುದಾಗಿದೆ. ಏಕೆಂದರೆ, ಯಾವದು ಕರಣರಹಿತವಾಗಿ ಯಾವದೊಂದನ್ನೂ ವಿಷಯವಾಗಿಸಿಕೊಳ್ಳಲಾರದೆ ಇರುವದೋ, ಯಾವದು ಯಾವ ಧರ್ಮವೂ ಇಲ್ಲದೆ ಏತಕ್ಕೂ ವಿಷಯವಾಗದೆ ಇರುವದೋ ಅದು ಇದೆಯೆಂದು ಹೇಳುವದು ಸರಿಯಲ್ಲ'' ಎಂದು ಯಾರಿಗಾದರೂ ಎನಿಸಬಹುದು. ಆದರೆ ನಿಜವು ಹೀಗಿಲ್ಲ. ಏಕೆಂದರೆ ಅದು ನಿತ್ಯವಾಗಿರುತ್ತದೆ; ''ಈಗ ಇರುತ್ತದೆ, ಆಗ ಇರಲಿಲ್ಲ ಅಥವಾ ಮುಂದೆ ಇರುವದಿಲ್ಲ'' ಎನ್ನುವದಕ್ಕೆ ಬರುವಂಥದಲ್ಲ. ಅದು ವಿಭುವಾಗಿರುತ್ತದೆ, ಎಲ್ಲಾ ಪ್ರಾಣಿಗಳ ಆಕಾರಗಳಿಂದಲೂ ಅದೇ ಕಾಣಿಸುತ್ತಿರುತ್ತದೆ. ಅದು ಸರ್ವಗತವಾಗಿರುತ್ತದೆ; ಆಕಾಶವು ಹೇಗೆ ಎಲ್ಲಕ್ಕೂ ಒಳಗೂ ಹೊರಗೂ ನಡುವೆಯೂ ವ್ಯಾಪಿಸಿಕೊಂಡಿರುವದೋ ಹಾಗೆ ಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡಿರುತ್ತದೆ. ಆದರೆ ಅದು ಅತ್ಯಂತಸೂಕ್ಷ್ಮವಾಗಿರುತ್ತದೆ; ಅಷ್ಟೆ; ಇಂದ್ರಿಯಗೋಚರವಾಗತಕ್ಕ ಧರ್ಮಗಳು ಅದಕ್ಕೆ ಇಲ್ಲ. ಇಷ್ಟುಮಾತ್ರದಿಂದ ಅದು ಇಲ್ಲವೆನ್ನಬಹುದೆ? ಕಣ್ಣಿಗೆ ಗೋಚರವಾಗದ್ದು ಕಿವಿಗೂ, ಎರಡಕ್ಕೂ ಗೋಚರವಾಗದ್ದು ಮನಸ್ಸಿಗೂ ಗೋಚರವಾಗುವದು ಕಂಡಿಲ್ಲವೆ? ಹಾಗೆಯೇ ಇದು ಇಂದ್ರಿಯಗಳಿಗೆ ಗೋಚರವಾಗತಕ್ಕದ್ದಲ್ಲವಾದರೂ ಅದನ್ನು ಅರಿಯುವದಕ್ಕೆ ಆಗುವದೇ ಇಲ್ಲವೆಂದು ಹೇಳುವದಕ್ಕಾಗುವದಿಲ್ಲ. ಅದರಿಂದಲೇ ಎಲ್ಲಾ ಭೂತಗಳೂ ಉಂಟಾಗಿರುತ್ತವೆ. ಅತ್ಯಂತಸೂಕ್ಷ್ಮವಾಗಿರುವ ಆಕಾಶವು ಎಲ್ಲೆಲ್ಲಿಯೂ ಇದ್ದರೂ ಇಂದ್ರಿಯಗಳಿಗೆ ಗೋಚರವಾಗುವದಿಲ್ಲ. ಸಾಮಾನ್ಯರು ಅದನ್ನು ಇದೆಯೆಂದು ನೆನಸುವದೂ ಇಲ್ಲ. ಆದರೇನು? ಆಕಾಶವಿಲ್ಲದ ವಸ್ತುಗಳು ಉಂಟೆ? ಆಕಾಶದಲ್ಲಿಯೇ ಎಲ್ಲಾವಸ್ತುಗಳೂ ಇರುತ್ತವೆ. ಹಾಗೆಯೇ ಆಕಾಶಕ್ಕೂ ಕಾರಣವಾಗಿರುವ ಈ ಅಕ್ಷರವೆಂಬ ಪರತತ್ತ್ವವೇ ಎಲ್ಲಕ್ಕೂ ಕಾರಣವಾಗಿರುತ್ತದೆ. ಈ ಅಕ್ಷರದಲ್ಲಿಯೇ ಎಲ್ಲವೂ ಇರುತ್ತದೆ.

''ಹೀಗಿದ್ದರೂ ಇದು ನಮಗೇಕೆ ಅರಿಯಬರುವದಿಲ್ಲ? ನಾವೇಕೆ ಇದನ್ನು ಅರಿಯದಿರುವೆವು?'' ಎಂದು ನೀವು ಕೇಳಬಹುದು. ಇದಕ್ಕೆ ಕಾರಣವಿಷ್ಟೆ; ನಾವು ವಿವೇಕದಿಂದ ಲಕ್ಷ್ಯವಿಟ್ಟು ಈ ತತ್ತ್ವವನ್ನು ನೋಡಿರುವದಿಲ್ಲ. ಯಾರು ಯಾವದನ್ನು ಮನಸ್ಸಿಟ್ಟು ವಿಚಾರಿಸುವರೋ ಅವರಿಗೆ ಅದು ತಿಳಿಯಬರುತ್ತದೆ, ಅದರಂತೆ ಈ ಅಕ್ಷರವನ್ನೂ, ಈ ಬ್ರಹ್ಮವನ್ನೂ, ಮನಮುಟ್ಟಿ ನೋಡಿದರೆ ಇದು ನಮಗೆ ತಿಳಿಯಬರುತ್ತದೆ; ಇಷ್ಟೇ ಅಲ್ಲ, ಅವರಿಗೆ ಇದೊಂದೇ ಕಾಣಬರುತ್ತದೆ. ಹೀಗೆ ವಿವೇಕಿಗಳ ದೃಷ್ಟಿಯಿಂದ ನೋಡಿದಾಗ ಯಾವದೊಂದೇ ತತ್ತ್ವವು ಗೋಚರವಾಗುವದೋ ಆ ತತ್ತ್ವವನ್ನೂ, ಆ ಅಕ್ಷರವನ್ನೂ ತಿಳಿಸಿಕೊಡುವ ತಿಳಿವಳಿಕೆಯೇ ಪರವಿದ್ಯೆ.



## 3. ಬ್ರಹ್ಮವೇ ಎಲ್ಲಕ್ಕೂ ಕಾರಣ

ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಮೋಷಧಯಃ ಸಂಭವನ್ತಿ।
ಯಥಾ ಸತಃ ಪುರುಷಾತ್ ಕೇಶಲೋಮಾನಿ
ತಥಾಽಕ್ಷರಾತ್ ಸಂಭವತೀಹ ವಿಶ್ವಮ್ ॥7॥

ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ।
ಅನ್ನಾತ್ ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಮ್ ॥8॥

ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ।
ತಸ್ಮಾದೇತದ್ ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ ॥9॥

*"ಜೇಡರಹುಳು ಹೇಗೆ ನೂಲನ್ನು ಹೊರಕ್ಕೆ ಬಿಟ್ಟು ಒಳಕ್ಕೆಳೆದು ಕೊಳ್ಳುವದೋ, ಪೃಥ್ವಿಯಲ್ಲಿ ಹೇಗೆ ಮರಗಿಡಗಳು ಹುಟ್ಟುವವೋ, ಹೇಗೆ ಬದುಕಿರುವ ಪುರುಷನಿಂದ ತಲೆಗೂದಲೂ ಮೈಗೂದಲೂ ಬೆಳೆದುಕೊಳ್ಳುವವೋ, ಹಾಗೆಯೇ ಅಕ್ಷರದಿಂದ ಎಲ್ಲವೂ ಉಂಟಾಗುತ್ತವೆ. ಬ್ರಹ್ಮವು ತಪಸ್ಸಿನಿಂದ ಉಬ್ಬುತ್ತದೆ; ಆಮೇಲೆ ಅನ್ನವುಂಟಾಗುತ್ತದೆ. ಅನ್ನದಿಂದ ಪ್ರಾಣವೂ ಮನಸ್ಸೂ ಭೂತಪಂಚಕವೂ ಲೋಕಗಳೂ ಕರ್ಮವೂ ಅದರ ಎಂದಿಗೂ ನಾಶವಾಗದ ಫಲವೂ ಉಂಟಾಗುತ್ತವೆ. ಯಾವನು ಸರ್ವಜ್ಞನೂ ಸರ್ವವೇತ್ತನೂ ಆಗಿರುವನೋ, ಯಾವನ ತಪಸ್ಸು ಜ್ಞಾನಮಯವಾಗಿರುವದೋ, ಆ ಅಕ್ಷರರೂಪ ಪರಮಾತ್ಮನಿಂದ ಹಿರಣ್ಯಗರ್ಭಬ್ರಹ್ಮನೂ ನಾಮವೂ ರೂಪವೂ ಅನ್ನವೂ ಉಂಟಾಗುತ್ತದೆ."*

ಯಾವದೊಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುತ್ತದೆ?–ಎಂಬ ಪ್ರಶ್ನೆಗೆ ಉತ್ತರವಾಗಿ ಅಂಗಿರಸನು ಹೇಳಿದ ಉತ್ತರವಿದು. ಅಕ್ಷರವನ್ನು ತಿಳಿದುಕೊಂಡರೆ ಎಲ್ಲವನ್ನೂ ಅರಿತಂತೆ ಆಗುತ್ತದೆ. ಅಕ್ಷರವು ಮಿಕ್ಕ ಪದಾರ್ಥಗಳಂತೆ ತಾನೂ ಒಂದಲ್ಲ, ಅದು ಭೂತಯೋನಿಯು, ಅದು ಎಲ್ಲಕ್ಕೂ ಕಾರಣವಾಗಿರುತ್ತದೆ. ಎಲ್ಲವೂ ಅದೇ ಆಗಿರುವದರಿಂದ ಅದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತೆ ಆಗುತ್ತದೆ. ಒಂದನ್ನರಿತುಕೊಂಡರೆ ಇನ್ನೊಂದನ್ನು ಅರಿತಂತೆ ಎಂದಿಗೂ ಆಗಲಾರದು. ಆದರೆ ಅಕ್ಷರವೆಂಬ ಪರಮಾರ್ಥವು ಒಂದಲ್ಲ, ಅದು ಎರಡೂ ಅಲ್ಲ; ಅದರಲ್ಲಿ ಒಂದು, ಎರಡು–ಎಂಬ ಸಂಖ್ಯೆಯೇ ಇರುವದಿಲ್ಲ. ಅದಕ್ಕಿಂತ ಬೇರೆಯಾಗಿ ಮತ್ತೆಯಾವದೂ ಇರುವದೇ ಇಲ್ಲ. ಆದ್ದರಿಂದ ಒಂದು ಎರಡೆಂಬ ಗಣಿತವನ್ನೇ ನುಂಗಿಕೊಂಡಿರುವ ಈ

ಅಕ್ಷರವನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಂತೆ ಆಗುತ್ತದೆ.

ಅಕ್ಷರವು ಎಲ್ಲಕ್ಕೂ ಕಾರಣವೆಂದರೆ ಹೇಗೆ? ತಾನು ಒಂದೇ ಇದ್ದು ಮತ್ತೆ ಏತರ ಸಹಾಯವೂ ಇಲ್ಲದೆ ಬೇರೆ ಪದಾರ್ಥವನ್ನು ಹುಟ್ಟಿಸುವ ಕಾರಣವೊಂದುಂಟೆ? ಒಂದುವೇಳೆ ಇದ್ದರೂ ಒಂದರಿಂದ ಅನೇಕ ಬಗೆಯ ಕಾರ್ಯಗಳು ಉಂಟಾಗುವದುಂಟೆ? ಅದೂ ಉಂಟೆಂದರೂ ಕಾರಣವಾದ ತನಗಿಂತ ಅತ್ಯಂತವಿಲಕ್ಷಣವಾದ ಕಾರ್ಯಗಳನ್ನು ಹುಟ್ಟಿಸುವದುಂಟೆ? ಹೀಗೆಲ್ಲ ಕಾರ್ಯವುಂಟಾಗಬಹುದಾದರೂ ಕಾರಣವು ಮತ್ತೆ ಅದನ್ನೆಲ್ಲ ತನ್ನೊಳಗೆ ಅಡಕಮಾಡಿಕೊಂಡುಬಿಟ್ಟು ಎಲ್ಲವೂ ತಾನೇ ಆಗಿಬಿಡುವದು ಹೇಗೆ?–ಎಂಬ ಶಂಕೆಯು ಉಂಟಾಗಬಹುದು. ಈ ಶಂಕೆಯನ್ನು ತೊಲಗಿಸುವದಕ್ಕೆ ಈಗ ಲೌಕಿಕದೃಷ್ಟಾಂತವನ್ನು ಕೊಡಲಾಗುತ್ತದೆ.

ದೃಷ್ಟಾಂತವು ಎಂದಿಗೂ ದೃಷ್ಟಾಂತವೇ, ಅದು ಎಲ್ಲಾ ಬಗೆಯಿಂದಲೂ ದಾರ್ಷ್ಟಾಂತಿಕಕ್ಕೆ ಸಮನಾಗಿರಬೇಕೆಂಬ ನಿರ್ಬಂಧವಿಲ್ಲ–ಎಂಬುದನ್ನು ಮೊದಲು ನೆನಪಿಡಬೇಕು. ಆದ್ದರಿಂದಲೇ ಇಲ್ಲಿ ಒಂದೊಂದು ಬಗೆಯ ಸಂಶಯವನ್ನು ನೀಗುವದಕ್ಕೆ ಬೇರೆಬೇರೆ ಒಂದೊಂದು ಬಗೆಯ ದೃಷ್ಟಾಂತವನ್ನು ಕೊಟ್ಟಿರುವದು. ತಾನೊಂದೇ ಇದ್ದು ಮತ್ತೊಂದರ ಸಹಾಯವಿಲ್ಲದೆ ಕಾರ್ಯವನ್ನುಂಟುಮಾಡುವ ಕಾರಣವುಂಟೆ? ಉಂಟು. ಜೇಡರಹುಳುವನ್ನು ನೋಡಿರಿ ; ಅದಕ್ಕೆ ಮತ್ತೆ ಏತರ ಸಹಾಯವೂ ಬೇಕಿರುವದಿಲ್ಲ; ಅದು ತಾನು ಇದ್ದಂತೆಯೇ ಇದ್ದು ನೂಲನ್ನು ಉಂಟುಮಾಡುತ್ತದೆ. ಆ ನೂಲೆಲ್ಲ ತಾನೇ ಆಗಿರುವದೆಂಬುದಕ್ಕೆ ಪ್ರಮಾಣವಾಗಿ ಅದನ್ನು ತನ್ನೊಳಕ್ಕೆ ಎಳೆದುಕೊಳ್ಳುತ್ತಲೂ ಇರುತ್ತದೆ. ಜೇಡರ ಹುಳುವಿಗೆ ಹೊರಗಿನಿಂದ ಮತ್ತೆ ಯಾವ ಸಹಾಯವೂ ಬೇಕಿಲ್ಲವೆಂಬ ವಿಷಯಕ್ಕೆ ನಮಗೆ ಸ್ವಲ್ಪ ಸಂದೇಹವಾದರೂ ಆಗಬಹುದು. ಏಕೆಂದರೆ ಅದರ ಸುತ್ತಲೂ ಬೇಕಾದಷ್ಟು ಆಹಾರಸಾಮಗ್ರಿ ಇದೆ ; ಅದನ್ನು ತಿಂದು ಅದು ನೂಲನ್ನು ಮಾಡಿಕೊಳ್ಳುತ್ತದೆ. ಆದರೆ ಪೃಥ್ವಿಯನ್ನು ನೋಡಿರಿ; ಪೃಥ್ವಿಯು ತಾನು ಇದ್ದಂತೆಯೇ ಇರುತ್ತದೆ ; ತನಗಿಂತ ಬೇರೆ ಮತ್ತೊಂದು ಯಾವದೂ ಇಲ್ಲದೆ ಇದ್ದರೂ, ತಾನೇ ಗಿಡಮರಗಳಾಗಿ ಬೆಳೆದುಕೊಳ್ಳುತ್ತದೆ. ಗಿಡವು ಬೆಳೆಯುವದಕ್ಕೆ ಭೂಮಿಯಲ್ಲಿರುವ ಬೀಜವೂ ಸಾರವೂ ಅಲ್ಲದೆ ಹೊರಗಿನ ಗಾಳಿ, ನೀರು, ಗೊಬ್ಬರ–ಇವೂ ಬೇಕಲ್ಲವೆ?–ಎಂದು ಯಾರಾದರೂ ಕೇಳಬಹುದು. ಆದರೆ ಇದೆಲ್ಲವೂ ಸೇರಿಯೇ ಪೃಥ್ವಿಯೆನಿಸಿರುವದು. ಪೃಥ್ವಿಯು ತಾನೇ ಬೀಜವಾಗುತ್ತದೆ; ತಾನೇ ಗೊಬ್ಬರವಾಗುತ್ತದೆ; ತಾನೇ ಗಿಡಮರವೂ ಆಗುತ್ತದೆ. ಇದರಂತೆ ಅಕ್ಷರವು ತಾನೇ ಎಲ್ಲವೂ ಆಗುತ್ತದೆ ಎಂಬುದು ದೃಷ್ಟಾಂತದ ಬಲದಿಂದ ಮನಸ್ಸಿಗೆ ಹಿಡಿಯುತ್ತದೆ.

ಆದರೆ ಇಲ್ಲಿ ಮತ್ತೊಂದು ಸಂದೇಹವು ಬರಬಹುದು : ಯಾವದು ತಾನೂ ವಿಚಿತ್ರವಾಗಿರವದೋ ಅಂಥ ಪೃಥ್ವಿಯಿಂದ ಮರಗಿಡಗಳೂ ಪ್ರಾಣಿಗಳೂ

ಬಗೆಬಗೆಯಾಗಿ ಉಂಟಾಗಬಹುದು ; ಆದರೆ ಕಾರಣವು ತಾನು ಒಂದೇ ಇದ್ದು ತನ್ನೊಳಗೆ ಯಾವ ವೈಚಿತ್ರ್ಯವೂ ಇಲ್ಲದೆ ತನಗಿಂತ ಅತ್ಯಂತವಿಲಕ್ಷಣವಾದ ಕಾರ್ಯವನ್ನುಂಟು ಮಾಡಬಹುದೆ? ಈ ಶಂಕೆಗೆ ಪರಿಹಾರವಾಗಿ ಮನುಷ್ಯನ ದೃಷ್ಟಾಂತವನ್ನು ಕೊಡ ಬಹುದು. ಮನುಷ್ಯನು ಒಂದೇ ಬಗೆಯಲ್ಲಿರುತ್ತಾನೆ. ಅವನಿಂದ ಅತ್ಯಂತ ವಿಲಕ್ಷಣವಾದ, ಅನೇಕ ಬಗೆಬಗೆಯ ಕೂದಲುಗಳು ಹುಟ್ಟುತ್ತವೆ. ಅವನಿಂದ ಹುಟ್ಟುವ ಮೈಗೂದಲೇ ಒಂದು ತೆರನಾಗಿರುತ್ತದೆ; ತಲೆಗೂದಲೇ ಬೇರೆ ತೆರನಾಗಿರುತ್ತದೆ. ಅವನ ಮೈಯಿಂದ ಹುಟ್ಟುವ ಉಗುರು, ಬೆವರು, ಕುಗ್ಗಿ, ಜೊಲ್ಲು–ಮುಂತಾದದ್ದು ಎಷ್ಟು ಬಗೆಬಗೆಯಾಗಿರುತ್ತವೆ! ಅವುಗಳಲ್ಲಿ ಯಾವದೊಂದೂ ಮತ್ತೊಂದರಂತೆ ಇರುವದಿಲ್ಲ. ಹೀಗೆಯೇ ತಾನೇ ಚೈತನ್ಯಮಾತ್ರವಾಗಿರುವ ಅಕ್ಷರದಿಂದ ಈ ಚಿತ್ರವಿಚಿತ್ರವಾದ ಪ್ರಪಂಚವು ಉಂಟಾಗಬಹುದಾಗಿರುತ್ತದೆ.

ಇದುವರೆಗೆ ಹೇಳಿದ್ದೆಲ್ಲವೂ ದೃಷ್ಟಾಂತಬಲದಿಂದ. ದೃಷ್ಟಾಂತವನ್ನು ಕೊಡುವದು ಮನಸ್ಸಿಗೆ ವಿಷಯವು ಹಿಡಿಯಲೆಂದೇ ಹೊರತು, ದೃಷ್ಟಾಂತವೇ ಪ್ರಮಾಣವೆಂಬ ನಂಬಿಕೆಯಿಂದಲೇನೂ ಅಲ್ಲ. ದೃಷ್ಟಾಂತದಲ್ಲಿ ತೋರುವಂತೆ ದಾರ್ಷ್ಟಾಂತಿಕದಲ್ಲಿಯೂ ಇದೆ ಎಂಬುದಕ್ಕೆ ಬೇರೆ ಆಧಾರವು ಯಾವಾಗಲೂ ಅವಶ್ಯವಾಗಿರುತ್ತದೆ. ಇದೂ ಅಲ್ಲದೆ ಅಕ್ಷರದಿಂದ ಎಲ್ಲಾ ಭೂತಗಳೂ ಉಂಟಾಗಿವೆ ಎಂದು ಹೇಳಿರುವದು ಅದು ಅದ್ವಿತೀಯವೆಂದು ತಿಳಿಸುವದಕ್ಕೇ ಹೊರತು, ಅದರಲ್ಲಿ ನಿಜವಾಗಿ ಯಾವದಾದರೂ ವಿಕಾರವು ಆಗಿ ಪ್ರಪಂಚವು ಉಂಟಾಗಿರುತ್ತದೆ ಎಂಬ ಅಭಿಪ್ರಾಯದಿಂದಲೇನೂ ಅಲ್ಲ. ದೃಷ್ಟಾಂತದಲ್ಲಿ ತೋರಿಸಿರುವ ಜೇಡರಹುಳು, ಭೂಮಿ, ಮನುಷ್ಯನ ಶರೀರ–ಇವೆಲ್ಲವೂ ಸಾವಯವವಾಗಿರುತ್ತವೆ ; ಅವು ಕಾಲದಲ್ಲಿ ಮಾರ್ಪಟ್ಟು ನೂಲು, ಮರಗಿಡಗಳು, ಕೂದಲು–ಮುಂತಾದವುಗಳಾಗಿ ಪರಿಣಮಿಸುತ್ತವೆ. ಆದರೆ ದಾರ್ಷ್ಟಾಂತಿಕವಾಗಿರುವ ಬ್ರಹ್ಮದಲ್ಲಿ ಹಾಗೆ ಯಾವ ಮಾರ್ಪಾಡೂ ಆಗಿರುವದಿಲ್ಲ. ಆಗುವದಕ್ಕೆ ಅವಕಾಶವೂ ಇಲ್ಲ. ಏಕೆಂದರೆ ಬ್ರಹ್ಮವು ಅವಯವಗಳಿಲ್ಲದ್ದು, ಕಾಲಾತೀತವಾದದ್ದು, ಅದು ಅದೃಶ್ಯವಾದದ್ದು, ಅಗ್ರಾಹ್ಯವಾದದ್ದು, ಅತ್ಯಂತಸೂಕ್ಷ್ಮವಾಗಿರುವಂಥದ್ದು– ಎಂದು ಹಿಂದೆಯೇ ಹೇಳಿರುತ್ತೇವೆ. ಕಾಲಾಕಾಶಗಳಿಗಿಂತಲೂ ಸೂಕ್ಷ್ಮವಾಗಿ, ಕಾಲಾಕಾಶಗಳಿಗೂ ಕಾರಣವಾಗಿರುವ ಅದು ಜೇಡರಹುಳುವಿನಂತಾಗಲಿ ಭೂಮಿಯಂತಾಗಲಿ ಮನುಷ್ಯನ ಶರೀರದಂತಾಗಲಿ ಮಾರ್ಪಡುವದು ಹೇಗೆ? ಆದ್ದರಿಂದ ಅದು ಮಾರ್ಪಡುವದೆಂದು ತಿಳಿಸುವದು ಅಂಗಿರಸನ ಉದ್ದೇಶವಲ್ಲ; ಅದು ತಾನು ಇರುವಂತೆಯೇ ಇದ್ದು, ತನಗಿಂತ ಅತ್ಯಂತ ವಿಲಕ್ಷಣವಾದ, ನಾನಾತ್ವವುಳ್ಳ, ವಿಚಿತ್ರಪ್ರಪಂಚವಾಗಿ ಕಾಣಿಸುತ್ತಿರುತ್ತದೆಯೆಂಬುದನ್ನು ತಿಳಿಸುವದು ಮಾತ್ರ ಆತನ ಉದ್ದೇಶವಾಗಿರುತ್ತದೆ.

ಅದು ಹೇಗೆ? ಎಂದರೆ: ಈ ಅಕ್ಷರವೆಂಬ ಪರಮಾರ್ಥತತ್ತ್ವವು ಜ್ಞಾನಸ್ವರೂಪವಾಗಿರುತ್ತದೆ. ಜಗತ್ತನ್ನು ಸೃಷ್ಟಿಮಾಡುವದಕ್ಕೆ ವಿಶ್ವಾಮಿತ್ರನೇ ಮುಂತಾದ ಮಹಾಯೋಗಿಗಳಂತೆ ಅದು ಶರೀರಾಯಾಸದ ತಪಸ್ಸನ್ನು ಮಾಡಬೇಕಾದದ್ದೇನೂ ಇರುವದಿಲ್ಲ; ಅದು ತನ್ನ ಜ್ಞಾನಸ್ವರೂಪದಿಂದ ಇದ್ದಂತೆಯೇ ಇದ್ದು ಎಲ್ಲ ದೃಶ್ಯಗಳ ರೂಪವನ್ನೂ ತಳೆಯಬಲ್ಲದ್ದಾಗಿರುತ್ತದೆ; ಎಲ್ಲಾ ದೃಶ್ಯಗಳನ್ನೂ ಸಾಮಾನ್ಯವಾಗಿ ಬೆಳಗುವ ಚೈತನ್ಯವೇ ತಾನಾಗಿದ್ದು ವಿಶೇಷರೂಪದಿಂದ 'ಇಂಥದ್ದು,' 'ಇಂಥದ್ದು' ಎಂದು ಅರಿಯುವ ಜೀವರೂಪಚೈತನ್ಯವೂ ತಾನೇ ಆಗಬಲ್ಲದ್ದಾಗಿರುತ್ತದೆ.

ಈ ಜಗತ್ತೆಂಬುದೆಲ್ಲವೂ ನಾಮರೂಪಗಳ ಕಾರ್ಯವಾಗಿರುತ್ತದೆ. ಯಾವ ಯಾವದು ನಮ್ಮ ಹೊರಗೂ ನಮ್ಮೊಳಗೂ ತೋರಿಬರುವದೋ ಅದೆಲ್ಲವೂ ನಾಮರೂಪಗಳೇ. ಹೊರಗೆ ಕಾಣುವ ಲೋಕಗಳು, ಲೋಕದಲ್ಲಿರುವ ಸ್ಥಾವರ ಜಂಗಮಪ್ರಾಣಿಗಳು, ಆ ಪ್ರಾಣಿಗಳು ಮಾಡುವ ಲೌಕಿಕವೈದಿಕಕರ್ಮಗಳು, ಆ ಕರ್ಮಗಳ ಫಲಗಳು; ಇದರಂತೆ ನಮ್ಮೊಳಗೆ ಕಾಣಬರುವ ದೇಹ, ಪ್ರಾಣ, ಇಂದ್ರಿಯಗಳು, ಮನಸ್ಸು, ಬುದ್ಧಿ ಅಹಂಕಾರ, ನಮ್ಮ ಕರ್ತೃಭೋಕ್ತರೂಪ—ಇವೆಲ್ಲವೂ ನಾಮರೂಪಗಳ ವಿಲಾಸವಲ್ಲದೆ ಮತ್ತೆ ಬೇರೆ ಅಲ್ಲ. ಈ ನಾಮರೂಪಗಳು ಈಗ ನಮಗೆ ಬಿಡಿಬಿಡಿಯಾಗಿ ತೋರುತ್ತಾ ಬೇರೆಬೇರೆ ದೃಶ್ಯಗಳಾಗಿರುವವು ; ಪ್ರಲಯಕಾಲದಲ್ಲಿ ಅತ್ಯಂತಸೂಕ್ಷ್ಮರೂಪವಾಗಿರುವವು. ಬಿಡಿಬಿಡಿಯಾಗಿ (ವ್ಯಾಕೃತವಾಗಿ)ರಲಿ, ಎಲ್ಲಾ ಒಂದುಗೂಡಿ ಬೀಜರೂಪವಾಗಿ (ಅವ್ಯಾಕೃತವಾಗಿ)ರಲಿ—ಈ ನಾಮರೂಪಗಳ ತತ್ತ್ವವೆಲ್ಲ ಅಕ್ಷರವೇ. ಆ ಅಕ್ಷರರೂಪನಾದ ಪರಮಾತ್ಮನೇ ಜಗತ್ತನ್ನು ಸೃಷ್ಟಿಸುವ ಹಿರಣ್ಯಗರ್ಭನೆಂದೂ ಜಗತ್ತಿಗೆ ಬೀಜವಾಗಿರುವ ನಾಮರೂಪಗಳ ಬೀಜವಾದ ಅವ್ಯಾಕೃತವೆಂದೂ, ವ್ಯಾಕೃತರೂಪವಾದ ವಿಷಯಿವಿಷಯಗಳ ಗುಂಪಾದ ಲೋಕಗಳೆಂದೂ ಕ್ರಿಯಾಕಾರಕಫಲಗಳೆಂದೂ ಹೊರತೋರಿಕೊಳ್ಳುತ್ತಿರುತ್ತಾನೆ. ಲೋಕದಲ್ಲಿ ಯಾವ ಯಾವ ಪದಾರ್ಥವಿರಲಿ, ಅದನ್ನು ತಿಳಿಸುವ ಯಾವ ಯಾವ ವಾಕ್ಪ್ರಪಂಚದ ವಿಲಾಸವಿರಲಿ, ಅದೆಲ್ಲವೂ ಈ ಅಕ್ಷರಾತ್ಮನೇ; ಈತನಿಗಿಂತ ಬಿಟ್ಟು ಯಾವದೊಂದೂ ಇರುವದೇ ಇಲ್ಲ. ಈಶ್ವರನೆನ್ನಿರಿ, ಜೀವನೆನ್ನಿರಿ, ಕರ್ಮವೆನ್ನಿರಿ, ಕರ್ಮಕ್ಕೆ ತಪ್ಪದೆ ಆಗುವ ಫಲವೆನ್ನಿರಿ, ಫಲವನ್ನುಪಭೋಗಿಸುವದಕ್ಕೆ ನಿಮಿತ್ತವಾಗಿರುವ ಹೊರಗಿನ ಅಥವಾ ಒಳಗಿನ ದೃಶ್ಯಗಳೆನ್ನಿರಿ—ಎಲ್ಲವೂ ನಾಮರೂಪಗಳೇ, ಎಲ್ಲವೂ ತನ್ನ ನಿಜವಾದ ಸ್ವರೂಪದಿಂದ ಅಕ್ಷರವೇ, ಪರಮಸತ್ಯವಾದ ಅನಂತವಾದ ಪರಬ್ರಹ್ಮವೇ. ಅದನ್ನು ಬಿಟ್ಟರೆ ಯಾವದೊಂದೂ ಇಲ್ಲವೇ ಇಲ್ಲ. ಇದನ್ನರಿತುಕೊಳ್ಳುವದೇ ಪರವಿದ್ಯೆ.



## 4. ಅಪರವಿದ್ಯೆ: ಕರ್ಮವು ನಿಯಮಕ್ಕೆ ಒಳಪಟ್ಟಿದ್ದು

ತದೇತತ್ ಸತ್ಯಂ ಮನ್ತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯಂಸ್ತಾನಿ
ತ್ರೇತಾಯಾಂ ಬಹುಧಾ ಸನ್ತತಾನಿ।
ತಾನ್ಯಾಚರಥ ನಿಯತಂ ಸತ್ಯಕಾಮಾ ಏಷ ವಃ ಪನ್ಥಾಃ
ಸುಕೃತಸ್ಯ ಲೋಕೇ ॥1॥

ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ।
ತದಾಜ್ಯಭಾಗಾವನ್ತರೇಣಾಹುತೀಃ ಪ್ರತಿಪಾದಯೇತ್ ॥2॥

ಯಸ್ಯಾಗ್ನಿಹೋತ್ರಮದರ್ಶಮಪೌರ್ಣಮಾಸಮಚಾತುರ್ಮಾಸ್ಯಮನಾ-
ಗ್ರಯಣಮತಿಥಿವರ್ಜಿತಂ ಚ।
ಅಹುತಮವೈಶ್ವದೇವಮವಿಧಿನಾ ಹುತಮಾಸಪ್ತಮಾಂಸ್ತಸ್ಯ
ಲೋಕಾನ್ ಹಿನಸ್ತಿ ॥3॥

*"ಮಂತ್ರಗಳಲ್ಲಿ ಬಲ್ಲವರು ಕಂಡುಹಿಡಿದಿರುವ ಕರ್ಮಗಳಿವೆಯಲ್ಲ, ಇದು ಸತ್ಯವಾದದ್ದು. ಅವು ತ್ರೇತೆಯಲ್ಲಿ ಬಹುವಿಧವಾಗಿ ಹರಡಿಕೊಂಡಿರುವವು. ಸತ್ಯಕಾಮರೆ, ಅವನ್ನು ಗೊತ್ತಾಗಿ ಆಚರಣೆ ಮಾಡಿರಿ; ಸುಕೃತವನ್ನು ಪಡೆಯುವದಕ್ಕೆ ಇದೇ ಹಾದಿಯು. ಅಗ್ನಿಯು ಹತ್ತಿಕೊಂಡು ಉರಿಯು ಆಡುತ್ತಿರುವಾಗ, ಆಜ್ಯಭಾಗಗಳ ನಡುವೆ ಆಹುತಿಗಳನ್ನು ಕೊಡಬೇಕು. ಯಾವನ ಅಗ್ನಿಹೋತ್ರಕ್ಕೆ ದರ್ಶವಿಲ್ಲದೆ ಇರುವದೋ, ಪೌರ್ಣಮಾಸವಿಲ್ಲದೆ ಇರುವದೋ, ಚಾತುರ್ಮಾಸ್ಯವಿಲ್ಲದಿರುವದೋ, ಆಗ್ರಯಣವಿಲ್ಲದಿರುವದೋ, ಅತಿಥಿಗಳಿರುವದಿಲ್ಲವೋ, ಹೋಮವೇ ಇಲ್ಲವೋ, ವೈಶ್ವದೇವವಿಲ್ಲವೋ, ವಿಧಿವತ್ತಾದ ಹೋಮವಿಲ್ಲವೋ-ಅದು ಅವನ ಏಳನೆಯವರೆಗಿನ ಲೋಕಗಳನ್ನು ನಾಶಪಡಿಸುತ್ತದೆ."*

ಎಲ್ಲವೂ ಅಕ್ಷರವೆಂಬ ನಾಶರಹಿತವಾದ ಪರಮಾತ್ಮತತ್ತ್ವದಿಂದಲೇ ಹುಟ್ಟಿರುವ ನಾಮರೂಪದ ವಿಲಾಸವಾಗಿರುವದರಿಂದ ಎಲ್ಲೆಲ್ಲಿಯೂ ಮನುಷ್ಯನಿಗೆ ಸತ್ಯತ್ವಬುದ್ಧಿಯೇ ಉಂಟಾಗುತ್ತಿರುತ್ತದೆ. ಲೋಕದಲ್ಲಿ ನಾವು ನೋಡುವ ಪ್ರತಿಯೊಂದು ಪದಾರ್ಥವೂ ನಾಮರೂಪಗಳ ಒಂದೊಂದು ಆಕಾರವಿಶೇಷವಾಗಿರುತ್ತದೆ. ಆದ್ದರಿಂದ ಅದೂ ಅದಕ್ಕಾಗಿ ನಾವು ಮಾಡುವ ವಿಚಾರಗಳೂ, ಕರ್ಮಗಳೂ, ಅದರಿಂದ ನಮಗೆ

ಉಂಟಾಗುವ ಭೋಗವೂ ಸತ್ಯವೆಂದೇ ನಾವು ಬಗೆಯುತ್ತೇವೆ. ಆದರೆ ಒಂದು ವಿಶೇಷವುಂಟು; ಲೋಕದಲ್ಲಿ ಕೆಲವು ಪದಾರ್ಥಗಳು ನಿತ್ಯವೆಂದೂ ಕೆಲವು ಅನಿತ್ಯವೆಂದೂ ನಾವು ವಿಂಗಡಮಾಡಿಕೊಂಡಿರುವೆವು. ಬಹುಕಾಲ ಇರುವದನ್ನೂ ಎಲ್ಲರಿಗೂ ಒಂದೊಂದು ಪ್ರಯೋಜನವನ್ನುಂಟುಮಾಡುವದಕ್ಕೆ ಶಕ್ಯವಾಗಿರುವದನ್ನೂ ನಾವು ನಿತ್ಯವೆನ್ನುವದಲ್ಲದೆ ಸತ್ಯವೆಂದೂ ಬಗೆಯುತ್ತೇವೆ. ಹೇಗೆಂದರೆ ಮರೀಚಿಕೆಯಲ್ಲಿ ತೋರುವ ನೀರು ಬರಿಯ ಭ್ರಾಂತಿಯು; ಅದರಿಂದ ಯಾವ ಬಾಯಾರಿಕೆಯೂ ಹಿಂಗುವದಿಲ್ಲ, ಆದ್ದರಿಂದ ಅದು ಅಸತ್ಯವು. ಒಂದು ಸಣ್ಣ ಗುಂಡಿಯಲ್ಲಿ ಕಾಣುವ ನೀರು ಸತ್ಯವು. ಏಕೆಂದರೆ ಅದನ್ನು ಕುಡಿದು ಯಾರಾದರೂ ಬಾಯಾರಿಕೆಯನ್ನು ಹಿಂಗಿಸಿಕೊಳ್ಳಬಹುದಾಗಿರುತ್ತದೆ. ಆದರೂ ಅದು ಅನಿತ್ಯವು, ಏಕೆಂದರೆ ಬೆಟ್ಟಬೇಸಿಗೆ ಬಂದರೆ ಅದು ಒಣಗಿಹೋಗುತ್ತದೆ. ಆದರೆ ಒಂದು ಮಹಾಸರೋವರದಲ್ಲಿರುವ ನೀರು ಎಷ್ಟೋ ಪ್ರಾಣಿಗಳಿಗೂ ಮನುಷ್ಯರಿಗೂ ಕುಡಿಯುವದು, ಬಟ್ಟೆವೊಗೆಯುವದು, ಸ್ನಾನಮಾಡುವದು—ಮುಂತಾದ ಪ್ರಯೋಜನಗಳನ್ನುಂಟುಮಾಡಿ ಬಹುಕಾಲದವರೆಗೆ ಇದ್ದುಕೊಂಡಿರುತ್ತದೆ. ಆದ್ದರಿಂದ ಅದು ಸತ್ಯವೂ ನಿತ್ಯವೂ ಆಗಿರುತ್ತದೆ. ಹೀಗೆಂದು ನಮ್ಮೆಲ್ಲರ ಭಾವನೆಯು ವ್ಯವಹಾರದಲ್ಲಿ ಇದ್ದುಕೊಂಡಿರುತ್ತದೆ.

ಈ ಸತ್ಯದ ಭಾವನೆಗೆ ಬುಡದಲ್ಲಿರುವದು ಯಾವದು?—ಎಂಬುದನ್ನು ನಮಗೆ ಶಾಸ್ತ್ರವು ತಿಳಿಸಿಕೊಡಬೇಕು. 'ಅಕ್ಷರ' ಎಂದು ನಾವು ಕರೆದಿರುವ ಪರಮಾತ್ಮನೇ ನಿಜವಾಗಿ ಪೂರ್ಣಾರ್ಥದಲ್ಲಿ ಸತ್ಯನು, ಅವನೇ ನಿತ್ಯನು. ಅವನಿಂದ ಹೊರಹೊರಟು ತೋರಿಕೊಳ್ಳುವದೆಲ್ಲವೂ ತನ್ನ ತನ್ನ ಕ್ಷೇತ್ರದಲ್ಲಿ ಸತ್ಯವೆಂದೂ ನಿತ್ಯವೆಂದೂ ಆತನ ಸತ್ಯತ್ವದ, ಆತನ ನಿತ್ಯತ್ವದ, ನೆರಳಿನಲ್ಲಿ ಕಾಣಿಸಿಕೊಳ್ಳುತ್ತದೆ. ಈ ತತ್ತ್ವವನ್ನು ತಿಳಿಸುವದಕ್ಕೆ ಅಂಗಿರಸನು ಹೊರಟು ವೇದೋಕ್ತವಾದ ಸತ್ಯವನ್ನು ಎರಡು ದೊಡ್ಡ ವಿಭಾಗವಾಗಿ ಮಾಡಿ ತಿಳಿಸಿರುತ್ತಾನೆ. ಲೋಕದಲ್ಲಿ ಮನುಷ್ಯನು ಎಷ್ಟು ಕಾಲ ಬಾಳಿ ಬದುಕಿ, ಎಷ್ಟು ಸತ್ಯವಾದ ಶಾಶ್ವತವಾದ ಸುಖವೆಂದು ನಂಬಿಕೊಂಡು ವ್ಯವಹಾರಮಾಡಿಕೊಂಡಿದ್ದರೂ, ಅವೆಲ್ಲವೂ ಸಾವಿಗೆ ತುತ್ತಾಗಿರುತ್ತವೆ. ಸಾಯುವ ಕಾಲಕ್ಕೆ 'ಇದೆಲ್ಲ ನಿತ್ಯವೆ, ಇದೆಲ್ಲ ಸತ್ಯವೆ?'— ಎಂಬ ಪ್ರಶ್ನೆಯು ವಿಚಾರಪರನಾದವನಿಗೆ ಹುಟ್ಟಿಯೇ ಹುಟ್ಟಿಕೊಳ್ಳುತ್ತದೆ. ಬಹಳ ವಿವೇಕಶಾಲಿಯಾದವನು ಮರಣಕಾಲದವರೆಗೂ ಕಾಯಬೇಕಾದದ್ದೇನೂ ಇರುವದಿಲ್ಲ. ಶೌನಕನಂತೆ ಧರ್ಮದ ಅನುಷ್ಠಾನದಿಂದಲೂ ವೈರಾಗ್ಯದಿಂದಲೂ ಕೂಡಿದ ಮಹಾಶಯನ ಚಿತ್ತದಲ್ಲಿ 'ಈ ಲೋಕದ ಬಾಳೆಂಬುದು ಮೂರುದಿನಗಳದು, ಇದು ನಿತ್ಯವಾಗಲಾರದು, ಇದು ಸತ್ಯವಾಗಲಾರದು' ಎಂಬ ಯೋಚನೆ ಹೊಳೆದೇತೀರುತ್ತದೆ. ಆದ್ದರಿಂದ ಶಾಸ್ತ್ರವು

ಹೇಳುವ ಸತ್ಯವನ್ನು ಎರಡು ದೊಡ್ಡ ವಿಭಾಗಗಳಾಗಿ ವಿಂಗಡಿಸಿ ಪರಮಸತ್ಯವನ್ನು ತಿಳಿಸುವದಕ್ಕಾಗಿ ಅಂಗಿರಸನು ಈಗ ಹೊರಟಿರುತ್ತಾನೆ.

ಆತನು ಹೇಳುವದಿದು ; "ಎಲೈ ಸತ್ಯಕಾಮರುಗಳಿರ, ನಿಮಗೆ ಸತ್ಯವೇ ಬೇಕಲ್ಲವೆ? ಇದೇ ಸತ್ಯವು. ನೀವು ಲೋಕದಲ್ಲಿ ನೋಡುವ ಸ್ವೇಚ್ಛೆಯ ಕರ್ಮಗಳಿಗೆ ಕ್ಷಣಭಂಗುರವಾದ ಫಲವುಂಟಾಗುವದೆಂಬುದು ನಿಮಗೆಲ್ಲ ತಿಳಿದಿದೆ. ಆದರೆ ನಾನು ಈಗ ಹೇಳುವ ಕರ್ಮಗಳಾಗಲಿ, ಅವುಗಳ ಫಲವಾಗಲಿ, ನಿಮಗೆ ತಿಳಿಯದು. ಅವುಗಳಿಂದ ಉಂಟಾಗುವ ಫಲವು ಒಂದು ಸಲ ಫಲವನ್ನು ಕೊಡುವದು, ಒಂದು ಸಲ ಕೊಡದೆ ಇರುವದು– ಹೀಗಿಲ್ಲ. ವೇದದಲ್ಲಿ ನಿಮಗೆ ಹೇಳಿರುವ ಮಾರ್ಗವು ಸುಕೃತದ ಹಾದಿಯು. ಸುಕೃತವೆಂದರೆ ಸರಿಯಾಗಿ ಕರ್ಮವನ್ನು ಮಾಡಿದರೆ ಅವಶ್ಯವಾಗಿ ಉತ್ತಮಫಲವನ್ನು ಕೊಡತಕ್ಕದ್ದು. ಇಲ್ಲಿ ನಾವು ಮಾಡುವ ಕರ್ಮಗಳು ಸಣ್ಣಸಣ್ಣ ಪದಾರ್ಥಗಳಿಂದ ಆಗತಕ್ಕವು, ಆದರೂ ಅವುಗಳು ಬಹುಕಾಲದವರೆಗೆ ತಪ್ಪದೆ ಫಲವನ್ನು ಕೊಡುವ ಕರ್ಮಗಳಾಗಿವೆ. ಅದನ್ನು ವಸಿಷ್ಠ, ವಾಮದೇವ–ಮುಂತಾದ ಋಷಿಗಳು ಧ್ಯಾನದೃಷ್ಟಿಯಿಂದ ಕಂಡುಹಿಡಿದು ದಯೆಯಿಂದ ಲೋಕದ ಉದ್ಧಾರಕ್ಕಾಗಿ ತಿಳಿಸಿಕೊಟ್ಟಿರುತ್ತಾರೆ. ಅವುಗಳನ್ನು ಬಿಡದೆ ಆಚರಿಸಿರಿ, ನಿಮಗೆ ತಪ್ಪದೆ ಫಲವಾಗುತ್ತದೆ."

ಈ ಕರ್ಮಗಳಿಗೆ ಹೋತೃವಿನ ಋಗ್ವೇದ, ಅಧ್ವರ್ಯುವಿನ ಯಜುರ್ವೇದ, ಔದ್ಗಾತ್ರವಿನ ಸಾಮವೇದ–ಎಂಬ ಮೂರು ಆಶ್ರಯಗಳುಂಟು. ಆ ವೇದಗಳಿಂದ ಉಕ್ತವಾಗಿರುವ ರೀತಿಯಲ್ಲಿ ಕರ್ಮವನ್ನು ಮಾಡಿದರೆ ಅವಶ್ಯವಾಗಿ ಫಲವಾಗುತ್ತದೆ. ತ್ರೇತೆ, ಎಂದರೆ ವೇದತ್ರಯವು. ವೇದತ್ರಯದಿಂದ ತಿಳಿದುಬರುವ ಈ ಕರ್ಮಗಳು ಬಗೆಬಗೆಯಾಗಿರುತ್ತವೆ. ಇವುಗಳಿಗೆಲ್ಲ ಅಗ್ನಿಯಲ್ಲಿ ಮಾಡುವ ಹೋಮವೇ ದ್ವಾರವು. ಅಗ್ನಿಗೆ ಹವ್ಯವಾಹನನೆಂಬ ಹೆಸರುಂಟು. ನಾವು ಶ್ರದ್ಧೆಯಿಂದ ಮಾಡಿದ ಹೋಮಗಳನ್ನು ಆತನು ದೇವತೆಗಳಿಗೆ ತೆಗೆದುಕೊಂಡುಹೋಗಿ ಕೊಡುತ್ತಾನೆ. ಕರ್ಮಗಳನ್ನು ಮಾಡಿದ ನಮಗೆ ಅವರು ಆ ಕರ್ಮಗಳ ಫಲಗಳನ್ನು ತಪ್ಪದೆ ಕೊಡುತ್ತಾರೆ. ಹೀಗೆ ದೇವತೆಗಳ ಆರಾಧನೆಯಿಂದ ಮನುಷ್ಯರೂ, ಮನುಷ್ಯರು ಮಾಡುವ ಹೋಮಗಳಿಂದ ದೇವತೆಗಳೂ ಕಲ್ಯಾಣವನ್ನು ಪಡೆಯಬೇಕೆನ್ನುವದು ಈ ವಿಶ್ವದ ಒಂದಾನೊಂದು ನಿಯಮವಾಗಿರುತ್ತದೆ.

ಆದರೆ ಕರ್ಮಿಯಾದವನಿಗೆ ಒಂದು ಎಚ್ಚರಿಕೆ ಇರತಕ್ಕದ್ದು ಅವಶ್ಯವು. ಅದೇನೆಂದರೆ ವೇದೋಕ್ತವಾದ ಈ ಕರ್ಮವು ನಿಯತವಾಗಿ ಮಾಡತಕ್ಕದ್ದಾಗಿರುತ್ತದೆ. ದೇತೆಗಳು ಕೊಡುವ ಫಲದಾಸೆಯಿಂದ ಅದನ್ನು ಮಾಡತಕ್ಕದ್ದಲ್ಲ. ಕಾಮಿಯಾದವನು ಇಂಥಿಂಥ ಕಾಮಗಳನ್ನು ಪೂರ್ತಿಮಾಡಬೇಕೆಂದು ಪ್ರಾರ್ಥಿಸಿ ಕರ್ಮಗಳನ್ನು

ಮಾಡುವಾಗಲೂ ಅವುಗಳನ್ನು ವ್ಯವಸ್ಥಿತರೀತಿಯಿಂದ ಶಾಸ್ತ್ರೋಕ್ತರೀತಿಯಿಂದಲೇ ಮಾಡಬೇಕು. ಇದನ್ನು ಮಾಡಿಯೇತೀರಬೇಕೆಂದು ಶಾಸ್ತ್ರದಲ್ಲಿ ಗೊತ್ತುಮಾಡಿರುವ ಕರ್ಮಗಳನ್ನಂತೂ ಬಿಡದೆ ತಪ್ಪದೆ ಮಾಡಬೇಕು. ''ನಿಯತವಾಗಿ ಮಾಡಿರಿ'' ಎಂಬ ವಚನಕ್ಕೆ ಇದೇ ತಾತ್ಪರ್ಯವು.

ಇನ್ನೂ ಒಂದು ವಿಷಯವು: ವೇದೋಕ್ತವಾದ ಕರ್ಮಗಳನ್ನೆಲ್ಲವನ್ನೂ ಯಥಾವತ್ತಾಗಿ ಮಾಡಬೇಕು. ಅಗ್ನಿಯಲ್ಲಿ ಹಾಕುವ ಆಹುತಿಗಳನ್ನು ಇಂಥ ಹೊತ್ತಿನಲ್ಲಿ ಇಂಥ ಭಾಗದಲ್ಲಿ ಇಂಥ ಮಂತ್ರಗಳನ್ನುಚ್ಚರಿಸಿಯೇ ಹಾಕಬೇಕೆಂಬ ನಿಯಮವುಂಟು. ಅಗ್ನಿಹೋತ್ರವೇ ಮುಂತಾದ ಕರ್ಮಗಳಿಗೆ ಬೇಕಾಗುವ ಸಂಭಾರವೂ ಮನಸ್ಸೂ ಯಾವ ಬಗೆಯಿಂದಲೂ ಕೊರೆಯಾಗಬಾರದು. ಅಗ್ನಿಹೋತ್ರ, ದರ್ಶ, ಪೌರ್ಣಮಾಸ, ಚಾತುರ್ಮಾಸ್ಯ, ಆಗ್ರಯಣ, ಅತಿಥಿಪೂಜೆ–ಮುಂತಾದ ಕರ್ಮಗಳೆಲ್ಲವೂ ಸರಿಯಾಗಿ ನಡೆಯಲೇಬೇಕು. ವಿಧಿಗೆ ಸರಿಯಾಗಿ ನಡೆಯದಿದ್ದರೂ ಶ್ರದ್ಧಾದಿಗಳಿಲ್ಲದೆ ನ್ಯೂನಾತಿರಿಕ್ತಲೋಪಗಳೆಂಬ ತಪ್ಪುಗಳುಂಟಾದರೂ ಬರಿಯ ಆಯಾಸವೇ ಅವುಗಳಿಗೆ ಫಲವಾಗುತ್ತದೆ. ಲೋಕದಲ್ಲಿ ನಾವು ಮಾಡುವ ಕೆಲಸಗಳೂ ಹೀಗೆಯೇ. ''ಸಾವಿರ ಚಿತ್ತಾರವನ್ನು ಒಂದು ಮಸಿ ನುಂಗಿತು'' ಎಂಬ ಗಾದೆಯಂತೆ ಎಷ್ಟೋ ಸಲ ನಾವು ಕಷ್ಟಪಟ್ಟು ಮಾಡಿದ ಕರ್ಮಗಳಲ್ಲಿ ಒಂದೊಂದು ಸಾಧನವು ಕೊರೆಯಾದ್ದರಿಂದ ಕೆಲಸವೇ ಕೆಟ್ಟುಹೋದದ್ದು ನಮ್ಮಗಳ ಅನುಭವದಲ್ಲಿದೆ. ಇದರಂತೆಯೇ ಶಾಸ್ತ್ರೀಯ ಕರ್ಮಗಳ ವಿಷಯವನ್ನೂ ತಿಳಿಯಬೇಕು.

ಹೀಗೆ ವೇದವನ್ನು ಅಧ್ಯಯನಮಾಡಿ, ಅವುಗಳಲ್ಲಿ ಹೇಳಿರುವ ಕರ್ಮಗಳನ್ನು ಹೆಚ್ಚುಕುಂದುಗಳಿಲ್ಲದಂತೆ ಎಚ್ಚರಿಕೆಯಿಂದ ಶ್ರದ್ಧಾಪೂರ್ವಕವಾಗಿ ನಿಯತವಾಗಿ ಮಾಡಿದರೆ ಮನುಷ್ಯನಿಗೆ ಅವಶ್ಯವಾಗಿ ಫಲವಾಗಿಯೇ ತೀರುವದು. ಆ ಫಲವನ್ನು ಶ್ರುತಿಗಳಲ್ಲಿ ಬಹುವಾಗಿ ಕೊಂಡಾಡಿರುತ್ತದೆ. ಅದು ಎಂಥದ್ದೆಂಬುದನ್ನು ಇನ್ನು ವಿಚಾರಿಸಬೇಕಾಗಿರುತ್ತದೆ. ಆ ಫಲವು ಸತ್ಯವಾದದ್ದು, ಸುಕೃತವಾದದ್ದು–ಎಂಬೀ ಎರಡು ವಿಶೇಷಣಗಳನ್ನು ನಾವು ಸದ್ಯಕ್ಕೆ ನೆನಪಿನಲ್ಲಿಟ್ಟುಕೊಂಡಿರಬೇಕು. ಕರ್ಮಗಳು ಸತ್ಯವಾಗಿವೆ, ಎಂದರೆ ಅವುಗಳಿಂದ ಫಲವು ಅವಶ್ಯವಾಗಿ ದೊರಕಿಯೇ ತೀರುತ್ತದೆ. ಅವು ಸುಕೃತವಾಗಿದೆ, ಎಂದರೆ ಫಲವನ್ನು ಕೊಡುವ ಶಕ್ತಿಯು ಅವುಗಳಲ್ಲಿ ಅಡಗಿರುತ್ತದೆ. ಈ ಸತ್ಯತ್ವದ ಮತ್ತು ಈ ಶಕ್ತಿಯ ಎಲ್ಲೆಕಟ್ಟು ಯಾವದೆಂಬುದನ್ನು ನಾವು ಇಷ್ಟರಲ್ಲಿಯೇ ಕಂಡುಕೊಳ್ಳಬೇಕಾಗುತ್ತದೆ.



## 5. ಕರ್ಮದ ಪರಮಫಲ

ಕಾಲೀ ಕರಾಲೀ ಚ ಮನೋಜವಾ ಚ
ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।
ಸ್ಫುಲಿಙ್ಗಿನೀ ವಿಶ್ವರುಚೀ ಚ ದೇವೀ
ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥4॥

ಏತೇಷು ಯಶ್ಚರತೇ ಭ್ರಾಜಮಾನೇಷು
ಯಥಾಕಾಲಂ ಚಾಹುತಯೋ ಹ್ಯಾದದಾಯನ್ ।
ತಂ ನಯನ್ತ್ಯೇತಾಃ ಸೂರ್ಯಸ್ಯ ರಶ್ಮಯೋ
ಯತ್ರ ದೇವಾನಾಂ ಪತಿರೇಕೋಽಧಿವಾಸಃ ॥5॥

ಏಹ್ಯೇಹೀತಿ ತಮಾಹುತಯಃ ಸುವರ್ಚಸಃ
ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹನ್ತಿ ।
ಪ್ರಿಯಾಂ ವಾಚಮಭಿವದನ್ತ್ಯೋಽರ್ಚಯನ್ತ್ಯ
ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ॥6॥

*''ಅಗ್ನಿಗೆ ಕಾಲಿ(ಕರಿದು), ಕರಾಲಿ (ಭಯಂಕರವಾದದ್ದು), ಮನೋಜವೆ (ಮನಸ್ಸಿನಷ್ಟು ವೇಗವಾದದ್ದು), ಸುಲೋಹಿತೆ (ಬಲು ಕೆಂಚಗಿರುವದು), ಸುಧೂಮ್ರವರ್ಣೆ(ತೀರ ಹೊಗೆಯ ಬಣ್ಣದ್ದು), ಸ್ಫುಲಿಂಗಿನಿ (ಕಿಡಿಯುಳ್ಳದ್ದು), ವಿಶ್ವರುಚಿ (ಎಲ್ಲೆಲ್ಲಿಯೂ ಹೊಳೆಯುತ್ತಿರುವದು)–ಎಂದು ಏಳು ನಾಲಗೆಗಳು ಆಡುತ್ತಿರುವವು. ಇವು ಧಗಧಗಿಸುತ್ತಿರಲು ಕಾಲಕ್ಕೆ ಸರಿಯಾಗಿ ಯಾವನು ಹೋಮಮಾಡುವನೋ ಅವನನ್ನು ಆಹುತಿಗಳು ಸೂರ್ಯರಶ್ಮಿಗಳಾಗಿ ದೇವತೆಗಳೊಡೆಯನಾದ ಇಂದ್ರನ ಏಕಾಧಿಪತ್ಯವಿರುವ ಸ್ವರ್ಗಕ್ಕೆ ಕರೆದೊಯ್ಯುವವು. ಹೊಳೆಯುತ್ತಿರುವ ಆ ಆಹುತಿಗಳು ಆ ಯಜಮಾನನನ್ನು 'ಬಾರಯ್ಯ, ಬಾರಯ್ಯ' ಎಂದು ಸೂರ್ಯನ ರಶ್ಮಿಗಳ ರೂಪದಿಂದ 'ಇಗೋ, ಇದು ನಿಮ್ಮಗಳಿಗೆ ಪುಣ್ಯಕರವಾದ ಸುಕೃತವಾದ ಬ್ರಹ್ಮಲೋಕವು' ಎಂದು ಪ್ರಿಯವಾದ ಮಾತುಗಳನ್ನಾಡಿ ಗೌರವಿಸುತ್ತಾ ಕರೆದೊಯ್ಯುತ್ತವೆ.''*

ಸರಿಯಾಗಿ ವೇದೋಕ್ತಕರ್ಮವನ್ನು ಮಾಡಿದಾತನಿಗೆ ದೊರೆಯುವ ಅತ್ಯಂತವಾಗಿ ಹೆಚ್ಚಿನದೆನಿಸುವ ಫಲವು ಯಾವದು?–ಎಂಬುದನ್ನು ಮೇಲಿನ ಮೂರು ಮಂತ್ರಗಳಲ್ಲಿ ಹೇಳಿದೆ. ಶಾಸ್ತ್ರದಲ್ಲಿ ಹೇಳಿರುವಂತೆ ವಿಧಿವತ್ತಾಗಿ ಅಗ್ನಿಯನ್ನು ಆಧಾನಮಾಡಿ ಅದರಲ್ಲಿ ವಿಧಿ

ಯಲ್ಲಿ ಹೇಳಿದ ರೀತಿಯಿಂದ ಯಾಗವನ್ನು ಮಾಡಿದ ಯಜಮಾನನನ್ನು ಅವನಿಗೆ ದೊರೆಯಬೇಕಾದ ಉತ್ತಮಗತಿಗೆ ಸಂಬಂಧಿಸುವದೇ ಕರ್ಮದ ಕೆಲಸವು. ಅದನ್ನು ಇಲ್ಲಿ ಅತ್ಯಂತಸುಂದರವಾದ ಭಾಷೆಯಿಂದ ವರ್ಣಿಸಿರುತ್ತದೆ.

ಸೂರ್ಯನು ನಮ್ಮ ಭೂಮಿಗೆ ಎಷ್ಟೋ ಸಾವಿರಾರು ಯೋಜನಗಳ ಆಚೆ ಇರುತ್ತಾನೆ. ಆದರೂ ಆತನಿಗೂ ಭೂಮಿಗೂ ಸೂರ್ಯನ ಕಿರಣಗಳು ಸಂಬಂಧವನ್ನುಂಟು ಮಾಡಿರುತ್ತವೆ. ಇದು ಜಗತ್ಪ್ರಸಿದ್ಧವಾದ ವಿಷಯವು. ಸೂರ್ಯನ ಕಿರಣಗಳು ನಿಯತವಾಗಿ ನಮ್ಮ ಭೂಮಂಡಲದ ಮೇಲೆ ಬೀಳದಿದ್ದರೆ, ನಮ್ಮ ಭೋಲೋಕವು ಜೀವರುಗಳ ವಾಸಕ್ಕೆ ಯೋಗ್ಯವಾಗಿರುತ್ತಿರಲಿಲ್ಲ ; ಇಲ್ಲಿ ಗಿಡಮರಗಳೂ ಪೈರುಪಚ್ಚೆಗಳೂ ಬೆಳೆದು ಕಾಲಕ್ಕೆ ಸರಿಯಾಗಿ ಪಕ್ವವಾಗಿ ಬಗೆಬಗೆಯಾದ ಸವಿಯನ್ನೊಳಗೊಂಡಿರುವ ಹಣ್ಣುಹಂಪಲು ಗಳನ್ನೂ ಧಾನ್ಯಗಳನ್ನೂ ಕೊಡುತ್ತಿರಲಿಲ್ಲ. ಜೀವನಕ್ಕೆ ಬೇಕಾದ ಉಷ್ಣವನ್ನೂ ಆಹಾರಸಾಮಗ್ರಿಯನ್ನು ಸವಿಸವಿಯಾಗಿ ಸಿದ್ಧಗೊಳಿಸುವ ಪಾಚಕತೇಜಸ್ಸನ್ನೂ ವ್ಯವಹಾರಕ್ಕೆ ಬೇಕಾದ ಬೆಳಕನ್ನೂ ಕೊಟ್ಟು ಕಾಪಾಡುತ್ತಿರುವ ಸೂರ್ಯನ ಕಿರಣಗಳ ಉಪಕಾರವನ್ನು ನಾವು ಎಷ್ಟು ಹೊಗಳಿದರೆ ತಾನೆ ಸಾಕೆನಿಸೀತು? ಸೂರ್ಯನೇ ನಮ್ಮ ಜೀವವು, ಸೂರ್ಯನೇ ನಮ್ಮ ಜೀವನವು, ಸೂರ್ಯನೇ ನಮಗೆ ಪರಮಗತಿಯು–ಎಂದು ಹೇಳಿದರೂ ತಪ್ಪಾಗುವಂತಿಲ್ಲ. ಹೀಗೆ ತನಗೂ ನಮಗೂ ನಿಕಟಸಂಬಂಧವನ್ನು ಇಟ್ಟುಕೊಂಡಿರುವ ಸೂರ್ಯನನ್ನು ವೇದದಲ್ಲಿ 'ಮಿತ್ರ' ಎಂದು ಕರೆದಿರುವದು ಎಷ್ಟು ಸಮಂಜಸವಾಗಿದೆ!

ಕರ್ಮಗಳಿಗೂ ನಮಗೂ ಪರಮೇಶ್ವರನಿಗೂ ಇರುವ ಸಂಬಂಧವು ಈ ಬಗೆಯದೇ ಆಗಿರುತ್ತದೆ. ದಯಾಲುವಾದ ಪರಮೇಶ್ವರನು ತಾನು ಸೃಷ್ಟಿಸಿರುವ ಪ್ರಾಣಿಗಳಿಗೆ ಯಾವ ಸೌಕರ್ಯಕ್ಕೂ ಕೊರತೆಯಿಲ್ಲದಂತೆ ನೋಡಿಕೊಳ್ಳುತ್ತಿದ್ದಾನೆ; ನಮಗೆ ವಿಷಯವನ್ನು ತಿಳಿದುಕೊಳ್ಳುವದಕ್ಕೆ ಬೇಕಾದ ಇಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯನ್ನೂ ಕೊಟ್ಟಿರುತ್ತಾನೆ; ಸರಿಯಾದ ಧರ್ಮವನ್ನೂ ರೀತಿಯನ್ನೂ ತಿಳಿದುಕೊಳ್ಳುವದಕ್ಕೆ ಅನುಕೂಲವಾಗುವಂತೆ ಶಾಸ್ತ್ರವನ್ನೂ ಸಾಧುಗಳನ್ನೂ ಏರ್ಪಡಿಸಿರುತ್ತಾನೆ. ಸರಿಯಾದ ರೀತಿಯಿಂದ ನಡೆದುಕೊಂಡರೆ ಇಹದಲ್ಲಿ ಸುಖವೂ ಪರದಲ್ಲಿ ಸದ್ಗತಿಯೂ ದೊರಕುವಂತೆ ಏರ್ಪಾಡುಮಾಡಿರುತ್ತಾನೆ. ಶಾಸ್ತ್ರೋಕ್ತವಾದ ಕರ್ಮವನ್ನು ಮಾಡುವ ಧಾರ್ಮಿಕರಿಗೆ ಅವರು ಮಾಡುವ ಕರ್ಮಗಳೇ ಸೂರ್ಯನ ಕಿರಣಗಳಂತೆ ಇಹಕ್ಕೂ ಪರಕ್ಕೂ ಸಂಬಂಧಿಸುವ ಸಾಧನಗಳಾಗುವವು. ಅವುಗಳನ್ನು ಇಲ್ಲಿ ಮಾಡುವದರಿಂದ ಮನಸ್ಸು ಪವಿತ್ರವಾಗುವದು, ಮುಂದಿನ ಲೋಕದಲ್ಲಿ ಹೆಚ್ಚಿನ ಗತಿಯನ್ನು ಪಡೆಯುವದಕ್ಕೆ ಅವೇ ನಿಚ್ಚಣಿಗೆಯಾಗುವವು.

ಹೊರಗಿನ ಸೂರ್ಯಮಂಡಲವು ಎಷ್ಟೇ ನಮಗೆ ಮಿತ್ರನಾಗಿದ್ದರೂ ನಾವು ಅದನ್ನು ಈಗಿರುವ ರೀತಿಯಿಂದ ತೀರ ಸಮೀಪಿಸುವದಕ್ಕಿಲ್ಲ. ಸೂರ್ಯನು ಎಲ್ಲಿಯಾದರೂ ಈಗ ಇರುವದಕ್ಕಿಂತ ನಮಗೆ ಇನ್ನಷ್ಟು ಹತ್ತಿರವಿದ್ದಿದ್ದರೆ ನಾವೆಲ್ಲರೂ ಸುಟ್ಟು ಬೂದಿಯಾಗಿರುತ್ತಿದ್ದೆವು. ಆದರೆ ಕರ್ಮಗಳ ಫಲವಾಗಿರುವ ಸೂರ್ಯನು ಹಾಗಲ್ಲ. ಆತನ ಅನುಗ್ರಹದಿಂದ ನಾವು ಅವನ ಕಿರಣಗಳಂತಿರುವ ಕರ್ಮಗಳ ಆದರಕ್ಕೆ ಪಾತ್ರರಾಗುವೆವು. ಯಾರಾದರೊಬ್ಬ ಚಕ್ರವರ್ತಿಯ ಪ್ರಸಾದಕ್ಕೆ ಪಾತ್ರನಾದ ಪುಣ್ಯಾತ್ಮನನ್ನು ಅರಮನೆಯ ದೂತರು ಅತ್ಯಾದರದಿಂದ ಕರೆದುಕೊಂಡು ಹೋಗಿ ಚಕ್ರವರ್ತಿಯ ಸನ್ನಿಧಿಯನ್ನು ಸೇರಿಸುವಂತೆ ಯಜಮಾನನು ಮಾಡಿದ ಕರ್ಮಗಳೇ ದೇವದೂತರಾಗಿ ಅವನನ್ನು ಅತ್ಯಂತವಿನಯದಿಂದಲೂ ಸತ್ಕಾರದಿಂದಲೂ ಕರೆದುಕೊಂಡು ಹೋಗಿ ಪರಮೇಶ್ವರನ ಸ್ಥಾನವನ್ನು ಮುಟ್ಟಿಸುತ್ತವೆ.

ಕರ್ಮಗಳು ಮನುಷ್ಯನಿಗೆ ಹೇಗೆ ಆದರಮಾಡಿಯಾವು? ಅವು ಜಡವಲ್ಲವೆ?– ಎಂದು ಯಾರಾದರೂ ಶಂಕಿಸಬಹುದು. ಆದರೆ ಶಾಸ್ತ್ರದಲ್ಲಿ ಶ್ರದ್ಧೆಯಿರುವವರಿಗೆ ಈ ಬಗೆಯ ಶಂಕೆಯೂ ಬರುವದಕ್ಕೆ ಕಾರಣವಿಲ್ಲ. ಶಾಸ್ತ್ರವೆಂಬುದು ಅತೀಂದ್ರಿಯವಾಗಿರುವ ವಿಷಯಗಳನ್ನು, ನಮಗೆ ಇಂದ್ರಿಯಜ್ಞಾನದಿಂದ ದೊರಕಲಾರದ ತಿಳಿವನ್ನು, ತಿಳಿಸುವ ಸಾಧನವು. ಆದ್ದರಿಂದ ಶ್ರದ್ಧೆಯಿಂದ ಶಾಸ್ತ್ರದಲ್ಲಿ ಹೇಳಿದ ಕರ್ಮವನ್ನು ಮಾಡಿದರೆ ಫಲವು ಅವಶ್ಯವಾಗಿ ಆಗಿಯೇ ತೀರುವದೆಂದು ಕರ್ಮನಿಷ್ಠನಾದವನು ನಂಬುತ್ತಾನೆ. ಆದರೂ ಲೌಕಿಕದೃಷ್ಟಾಂತಗಳ ಬಲದಿಂದ ಈ ನಂಬಿಕೆಗೆ ಪುಷ್ಟಿಯನ್ನು ತಂದುಕೊಳ್ಳುವದೇನೂ ತಪ್ಪಲ್ಲ. ಲೋಕದಲ್ಲಿ ಕಾಣುವ ಗಿಡಮರಗಳೂ ಸಸ್ಯಗಳೂ ಎಲೆ, ಹೂ, ಹಣ್ಣುಗಳ ರೂಪವಾಗಿ ನಮಗೆ ಕಾಣಿಸುತ್ತವೆ; ಅವುಗಳಲ್ಲಿ ಮಾಂಸವಾಗಲಿ ರಕ್ತವಾಗಲಿ ನಮಗೆ ಗೋಚರವಾಗುವದಿಲ್ಲ. ಆದರೆ ವೈದ್ಯಶಾಸ್ತ್ರಜ್ಞರು ತಮ್ಮ ಕುಶಲಬುದ್ಧಿಯಿಂದ ಅವುಗಳ ಗುಣದೋಷಗಳನ್ನು ಪರೀಕ್ಷಿಸಿ ಇಂಥಿಂಥ ಆಹಾರದಿಂದ ನಮಗೆ ಇಂಥಿಂಥ ಪುಷ್ಟಿ ಪದಾರ್ಥವು ದೊರಕುವದೆಂದು ನಿರ್ಣಯಿಸಿರುತ್ತಾರೆ; ಅವರ ಬುದ್ಧಿವಾದವನ್ನನುಸರಿಸಿ ನಾವುಗಳೂ ಆಯಾ ಆಹಾರವನ್ನು ಸೇವಿಸಿ ಶರೀರಕ್ಕೆ ಪುಷ್ಟಿಯನ್ನೂ ಮನಸ್ಸಿಗೆ ತುಷ್ಟಿಯನ್ನೂ ಸಂಪಾದಿಸಿಕೊಳ್ಳುತ್ತಿರುವೆವಲ್ಲವೆ? ವೈದ್ಯರು ಇಂಥ ಹಣ್ಣಿನಿಂದ ಇಂಥ ದೇಹದ ಧಾತುವು ಹೇಗೆ ಉಂಟಾಗುವದೆಂಬುದನ್ನು ಹೇಳಲಾರರಾದರೂ ಅದು ಖಂಡಿತವಾಗಿ ಆಗುವದೆಂಬುದನ್ನು ಮಾತ್ರ ಹೇಳಬಲ್ಲವರಾಗಿರುತ್ತಾರೆ. ಇದರಂತೆ ಕರ್ಮವು ನಮ್ಮನ್ನು ಹೇಗೆ ಪರಲೋಕಕ್ಕೊಯ್ಯುವದೆಂಬುದನ್ನು ಹೇಳಲಾಗದೆ ಇದ್ದರೂ ಋಷಿಗಳೂ ಸಾಧುಗಳೂ ಕರ್ಮದ ಮಹಾಶಕ್ತಿಯನ್ನು ತಮ್ಮ ಧ್ಯಾನದೃಷ್ಟಿಯಿಂದ

ಕಂಡುಹಿಡಿದಿರುತ್ತಾರೆ. ಈ ಲೋಕದಲ್ಲಿಯೇ ಫಲವನ್ನು ಕೊಡುವ ಕರ್ಮಗಳು ಹೇಗೆ ಕರ್ಮವನ್ನು ಮಾಡಿದಾತನ ಬೆನ್ನುಹಿಡಿದುಕೊಂಡಿದ್ದು ಆಯಾ ಕಾಲದಲ್ಲಿ ಆಯಾ ದೇಶದಲ್ಲಿ ತಪ್ಪದೆ ಅವನಿಗೆ ಫಲವನ್ನು ಕೊಡುವದು ಕಂಡುಬಂದಿದೆಯೋ ಇದರಂತೆ ಪರಲೋಕ ದಲ್ಲಿಯೂ ಅವು ಅವಶ್ಯವಾಗಿ ಫಲವನ್ನು ಕೊಡಿಸುವ ಸಾಧನಗಳಾಗುವವೆಂದು ನಾವು ದೊಡ್ಡವರ ವಾಕ್ಯದ ವಿಶ್ವಾಸದಿಂದ ನಂಬಬಹುದಾಗಿರುತ್ತದೆ. ಆ ಕರ್ಮಗಳು ನಮ್ಮ ಹಿಂದೆಯೇ ಇರುವವು; ಅಥವಾ ಹಿಂದೇಕೆ ನಮಗಿಂತ ಅವು ಮುಂಚಿತವಾಗಿಯೇ ಹೊರಟು ನಮ್ಮ ಮುಂದುಗಡೆಯಲ್ಲಿಯೇ ಇದ್ದುಕೊಂಡು ''ಇಗೋ, ನೀವು ಮಾಡಿದ ಕರ್ಮಗಳಿಗೆ ಇದು ಫಲವು ; ಇದೇ ನಿಮಗೆ ಸಿಕ್ಕಬೇಕಾದ ಅತ್ಯಂತ ಮೇಲ್ತರದ ಸುಖವು'' ಎಂದು ಬೆಟ್ಟಿಟ್ಟು ತೋರಿಸುವಂತೆ ಇದ್ದುಕೊಂಡಿರುವವು ಎಂದು ನಾವು ಧಾರಾಳವಾಗಿ ನಂಬಬಹುದು.

ಶ್ರುತಿಯಲ್ಲಿ ಎಲ್ಲಕ್ಕೂ ಹೆಚ್ಚಿನ ವಸ್ತುವನ್ನು 'ಬ್ರಹ್ಮ'ವೆಂದು ಕರೆದಿರುತ್ತದೆ. ಬ್ರಹ್ಮವೆಂದರೇ ಎಲ್ಲಾ ಬಗೆಯಿಂದಲೂ ಮಿಗಿಲಿಲ್ಲದೆ ಇರುವದು ಎಂದರ್ಥ. ವೇದೋಕ್ತಕರ್ಮಗಳನ್ನು ಮಾಡಿದವರಿಗೆ ದೊರಕುವ ಮಿಗಿಲಿಲ್ಲದ ಫಲಕ್ಕೆ ಸ್ವರ್ಗವೆಂದು ವೇದಗಳು ಹೆಸರಿಟ್ಟಿರುತ್ತವೆ. ಸ್ವರ್ಗವೆಂದರೆ ಇಂಥ ಲೋಕವೆಂದು ಬಗೆಬಗೆಯಾಗಿ ಪುರಾಣಗಳಲ್ಲಿ ವರ್ಣಿಸಿರುವದನ್ನು ನಾವೆಲ್ಲರೂ ಕೇಳಿಯೇ ಇರುತ್ತೇವೆ ; ಆ ವರ್ಣನೆಗೆಲ್ಲ ಅರ್ಥವೇನೆಂದರೆ ಬೇಕಾದ ಸುಖಸಾಮಗ್ರಿಯೆಲ್ಲವೂ ಸ್ವರ್ಗದಲ್ಲಿರುತ್ತದೆ. ಯಾವ ದುಃಖವೂ ಇಲ್ಲದೆ, ಎಲ್ಲಕ್ಕೂ ಹೆಚ್ಚಿನ ಸುಖವು ಉಂಟಾಗುವದನ್ನೇ ಸ್ವರ್ಗವೆಂದು ತಿಳಿಯಬೇಕು.

ಸ್ವರ್ಗದಲ್ಲಿ ಇಂಥ ಹೆಚ್ಚಿನ ಸುಖವು ಹೇಗೆ ಆಗುತ್ತದೆ? ಆ ಸುಖಕ್ಕೆ ಅಡ್ಡಿಯೇಕೆ ಅಲ್ಲಿರುವದಿಲ್ಲ?–ಎಂದರೆ ಅಲ್ಲಿ ದೇವತೆಗಳೊಡೆಯನಾದ ಇಂದ್ರನು ಬಂದವರ ಸುಖಗಳಿಗೆ ಕಾರಣನಾಗಿ ಸ್ವರ್ಗದಲ್ಲಿರುವವರೆಲ್ಲರೂ ಸುಖವಾಗಿಯೇ ಇರುವಂತೆ ನೋಡಿಕೊಳ್ಳುತ್ತಾನೆ. ಸ್ವರ್ಗವು ಪುಣ್ಯಕರ್ಮಕ್ಕೆ ದೊರಕುವ ಹೆಚ್ಚಿನ ಸುಖವು, ಅಂಥ ಸುಖವನ್ನು ಪಡೆದವರಲ್ಲಿ ದೇವತೆಗಳಿಗೇ ಮೇಲಿನ ಸ್ಥಾನವಿರುತ್ತದೆ, ಆ ದೇವತೆಗಳಿಗೆಲ್ಲ ಇಂದ್ರನೇ ಒಡೆಯನಾಗಿರುತ್ತಾನೆ. ಸ್ವರ್ಗದಲ್ಲಿ ಇಂದ್ರನಿಗೆ ಸಮನಾದ ಸುಖವುಳ್ಳವರಾಗಲಿ ಅವನಿಗೆ ಸಮರಾದ ಅಧಿಕಾರವುಳ್ಳವರಾಗಲಿ ಯಾರೂ ಇರುವದಿಲ್ಲ. ವೇದೋಕ್ತವಾದ ಕರ್ಮವನ್ನು ವಿಧಿವತ್ತಾಗಿ ಮಾಡಿದವನು ಇಂಥ ಲೋಕವನ್ನು ಪಡೆದು ಸುಖಿಸುತ್ತಾನೆ. ಇದೇ ಕರ್ಮಕ್ಕೆ ಸಿಕ್ಕಬಹುದಾದ ಫಲದ ಅವಧಿಯು.



## 6. ಕರ್ಮದ ಎಲ್ಲೆಕಟ್ಟು

ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ
ಅಷ್ಟಾದಶೋಕ್ತಮವರಂ ಯೇಷು ಕರ್ಮ।
ಏತಚ್ಛ್ರೇಯೋ ಯೇಽಭಿನನ್ದನ್ತಿ ಮೂಢಾ
ಜರಾಮೃತ್ಯುಂ ತೇ ಪುನರೇವಾಪಿ ಯನ್ತಿ ॥7॥

ಅವಿದ್ಯಾಯಾಮನ್ತರೇ ವರ್ತಮಾನಾಃ
ಸ್ವಯಂ ಧೀರಾಃ ಪಣ್ಡಿತಂಮನ್ಯಮಾನಾಃ।
ಜಙ್ಘನ್ಯಮಾನಾಃ ಪರಿಯನ್ತಿ ಮೂಢಾಃ
ಅನ್ಧೇನೈವ ನೀಯಮಾನಾ ಯಥಾನ್ಧಾಃ ॥8॥

ಅವಿದ್ಯಾಯಾಂ ಬಹುಧಾ ವರ್ತಮಾನಾಃ
ವಯಂ ಕೃತಾರ್ಥಾ ಇತ್ಯಭಿಮನ್ಯನ್ತಿ ಬಾಲಾಃ।
ಯತ್ ಕರ್ಮಿಣೋ ನ ಪ್ರವೇದಯನ್ತಿ ರಾಗಾತ್
ತೇನಾತುರಾಃ ಕ್ಷೀಣಲೋಕಾಶ್ಚ್ಯವನ್ತೇ ॥9॥

ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ
ನಾನ್ಯಚ್ಛ್ರೇಯೋ ವೇದಯನ್ತೇ ಪ್ರಮೂಢಾಃ।
ನಾಕಸ್ಯ ಪೃಷ್ಠೇ ತೇ ಸುಕೃತೇಽನುಭೂತ್ವಾ
ಇಮಂ ಲೋಕಂ ಹೀನತರಂ ವಾ ವಿಶನ್ತಿ ॥10॥

*''ಈ ಯಜ್ಞಕ್ಕೆ ಬೇಕಾದ ಹದಿನೆಂಟು–ಯಾವವನ್ನಾಶ್ರಯಿಸಿ ಕೀಳುಕರ್ಮವನ್ನು ಹೇಳಿದೆಯೋ, (ಈ ಹದಿನೆಂಟು)–ಹಗುರ, ಗಟ್ಟಿಯಲ್ಲ. ಆದ್ದರಿಂದ ಇವನ್ನೇ ಶ್ರೇಯಸ್ಸೆಂದು ಯಾವ ಮೂಢರು ಉಬ್ಬುವರೋ ಅವರು ಮತ್ತೂ ಮತ್ತೂ ಮುಪ್ಪುಸಾವುಗಳನ್ನು ಹೊಂದುತ್ತಿರುವರು. ಅವಿದ್ಯೆಯ ನಡುವೆ ಇರುವವರಾಗಿ ತಾವೇ ಬುದ್ಧಿವಂತರು, ಪಂಡಿತರು ಎಂದುಕೊಂಡು ಮೂಢರು, ಕುರುಡರು ಕರೆದುಕೊಂಡು ಹೋಗುತ್ತಿರುವ ಕುರುಡರಂತೆ, ಸಂಕಟಪಡುತ್ತಾ ತೊಳಲುತ್ತಿರುವರು. ಅವಿದ್ಯೆಯಲ್ಲಿ ಬಹುಬಗೆಯಾಗಿರುವವರಾಗಿ ನಾವು ಕೃತಾರ್ಥರು ಎಂದು ಹುಡುಗರು ಹೆಮ್ಮೆಪಡುತ್ತಿರುವರು. ಹೀಗೆ ಕರ್ಮ*

*ರಾಗದಿಂದ ನಿಜವನ್ನು ತಿಳಿಯದಿರುವದರಿಂದ ಲೋಕವು ಕ್ಷಯವಾಗುತ್ತಲೂ ಸಂಕಟದಿಂದ ಜಾರಿಬೀಳುವರು. ಇಷ್ಟಾಪೂರ್ತವೇ ಹೆಚ್ಚೆಂದು ತಿಳಿದು ಆ ಪರಮಮೂಢರು ಇದಕ್ಕಿಂತ ಬೇರೆ ಶ್ರೇಯಸ್ಸನ್ನು ಅರಿಯದೆ ಇರುವರು. ಸುಕೃತವಾದ ಸ್ವರ್ಗದಲ್ಲಿ ಫಲವನ್ನನುಭವಿಸಿದ ಮೇಲೆ ಈ ಲೋಕವನ್ನೋ ಇನ್ನೂ ಕೀಳುಲೋಕವನ್ನೋ ಹೊಗುತ್ತಿರುವರು.''*

ಕರ್ಮವು ಸತ.ವಾದದ್ದು ಎಂದರೆ ಅದರ ಫಲವು ಅವಶ್ಯಕವಾಗಿ ಆಗಿಯೇ ತೀರತಕ್ಕದ್ದು; ಅದು ಸುಕೃತವಾದದ್ದು ತನ್ನ ಫಲವನ್ನು ತಾನೇ ಕೊಡುವ ಶಕ್ತಿಯನ್ನು ಅಡಗಿಸಿಕೊಂಡಿರುತ್ತದೆ, ಇದು ಹೇಗೆಂಬುದನ್ನು ವಿವರಿಸಿದ್ದಾಗಿರುತ್ತದೆ. ಆದರೆ ಕರ್ಮದಲ್ಲಿರುವ ಸತ್ಯತ್ವಕ್ಕೂ ಅದರ ಸುಕೃತತ್ವಕ್ಕೂ ಒಂದು ಎಲ್ಲೆಕಟ್ಟು ಇರುತ್ತದೆ. ಆ ಎಲ್ಲೆಕಟ್ಟನ್ನು ಮೀರಿಯೂ ಅದು ಸತ್ಯವಾಗಿ ತನಗೆತಾನೇ ಆಗುವ ಫಲವನ್ನು ಕೊಟ್ಟೀತೆಂದು ನಂಬುವದು ಸರಿಯಲ್ಲ, ಹಾಗೆ ನಂಬುವವರು ಖಂಡಿತವಾಗಿ ಆಶಾಭಂಗದಿಂದ ಮೋಸಹೋಗುವರು. ಇದು ಹೇಗೆಂಬುದನ್ನು ಮೇಲಿನ ಮಂತ್ರಗಳಲ್ಲಿ ತಿಳಿಸಿರುತ್ತದೆ.

ಯಾವದು ಯಾವದನ್ನು ಆಶ್ರಯಿಸಿ ಉಂಟಾಗುತ್ತದೆಯೋ ಅದು ಆ ತನ್ನ ಆಶ್ರಯಕ್ಕೆ ತಕ್ಕಂತೆ ಬಲವುಳ್ಳದ್ದಾಗಿರುತ್ತದೆ. ತಳಹದಿಯು ಗಟ್ಟಿಯಾಗಿಲ್ಲದ ಮನೆಯು ಬಹುಕಾಲ ಗಟ್ಟಿಯಾಗಿ ನಿಂತಿರುವದೆಂದು ಯಾರೂ ನಿರೀಕ್ಷಿಸುವದಿಲ್ಲ, ಅಲ್ಲವೆ? ಇದರಂತೆ ಕರ್ಮವಾಗಲಿ ಅದರಿಂದಾಗುವ ಫಲವಾಗಲಿ ತನ್ನ ತಳಗಟ್ಟನ್ನನುಸರಿಸಿಯೇ ಬಾಳ ಬೇಕಾಗಿರುತ್ತದೆ. ಆ ತಳಗಟ್ಟು ಎಷ್ಟು ಭದ್ರವೋ ಅದಕ್ಕೆ ತಕ್ಕಷ್ಟೇ ಈ ಕರ್ಮಫಲವೆಂಬ ಕಟ್ಟಡವೂ ಭದ್ರವಾಗಿರುತ್ತದೆ. ಇದು ಯುಕ್ತವಾಗಿಯೇ ಇರುತ್ತದೆ. ಕರ್ಮದ ತಳಗಟ್ಟು ಯಾವುದು? ಇದಕ್ಕೆ ಯಜಮಾನನು ಎಂದರೆ ಕರ್ಮವನ್ನು ಮಾಡುವ ಕರ್ತೃ ಬೇಕು, ಅವನ ಧರ್ಮಪತ್ನಿಯು ಬೇಕು, ಹದಿನಾರು ಜನ ಋತ್ವಿಕ್ಕರು ಬೇಕು. ಈ ಹದಿನೆಂಟು ಜನರೂ ತಮ್ಮ ತಮ್ಮ ಕರ್ಮವನ್ನು ನಿಯಮದಿಂದಲೂ ಶ್ರದ್ಧೆಯಿಂದಲೂ ಮಾಡಿದ ಫಲವೇ ಕರ್ಮಫಲವು. ಈ ಕರ್ಮಾಶ್ರಯವೇನೂ ಗಟ್ಟಿಯಾದ ತಳಹದಿಯಲ್ಲವೆಂಬುದು ಮೇಲೆಯೇ ಕಾಣುತ್ತದೆ; ಕರ್ಮಫಲವು ಅದರ ಭದ್ರತೆಗೆ ತಕ್ಕಷ್ಟು ಕಾಲ ಇದ್ದೀತೇ ಹೊರತು ಹೆಚ್ಚು ಕಾಲ ಹೇಗೆ ಇದ್ದೀತು? ಆದ್ದರಿಂದ ಯಾರು ಈ ಕರ್ಮವೇ ತಮ್ಮನ್ನು ಪಾರುಗಾಣಿಸುವದೆಂದೂ ಇದೇ ತಮಗೆ ಪರಮಗತಿಯನ್ನು ಕೊಡುವದೆಂದೂ ನೆಚ್ಚಿರುವರೋ ಅವರಿಗೆ ಎಂದಿಗೂ ಮನೋರಥವು ಪೂರ್ಣವಾಗಲಾರದು. ಒಂದಲ್ಲದಿದ್ದರೆ ಒಂದು ದಿನ ಅವರು ಮತ್ತೆ ಮನುಷ್ಯರಾಗಬೇಕು, ಮತ್ತೆ ಹುಟ್ಟಿ ಮುಪ್ಪಿನ ದುಃಖವನ್ನೂ ಸಾವಿನ ದುಃಖವನ್ನೂ ಸವಿನೋಡಲೇಬೇಕು.

ಬರಿಯ ಕರ್ಮವೇ ತಮಗೆ ಅತ್ಯಂತವಾದ ಸುಖವನ್ನು ಕೊಡುವದೆಂದು ಯಾರು ನಂಬಿರುವರೋ ಅವರ ಸ್ಥಿತಿಯು ನಿಜವಾಗಿಯೂ ಹಾಸ್ಯಾಸ್ಪದವಾಗಿರುತ್ತದೆ. ಅವರು ಲೌಕಿಕಕರ್ಮಗಳನ್ನು ನೆಚ್ಚಿಕೊಂಡಿರುವ ಸಾಮಾನ್ಯರಿಗಿಂತ ಮೇಲುಗೈಯಾಗಿರಬಹುದು. ಆದರೇನು? ಅವರಿಬ್ಬರೂ ಕಾರುಗತ್ತಲೆಯಲ್ಲಿರುವವರೇ, ಇಬ್ಬರಿಗೂ ಅವಿದ್ಯೆಯ ಮಬ್ಬು ತಪ್ಪಿದ್ದಲ್ಲ. ಕತ್ತಲೆಯಲ್ಲಿ ಕಣ್ಣುಕಾಣದೆ ಇರುವವರಲ್ಲಿ ಯಾರು ಮುಂದಿದ್ದರೇನು, ಯಾರು ಹಿಂದಿದ್ದರೇನು? ಇಬ್ಬರೂ ತಬ್ಬಿಬ್ಬಾಗಿ ತಟ್ಟಾಡುವದೇ! ಕುರುಡರಲ್ಲಿ ಕೆಲವರು "ಎಲಾ, ಇದು ಸರಿಯಾದ ದಾರಿಯಲ್ಲ; ಇಗೋ, ಹೀಗೆ ಬನ್ನಿರಿ!" ಎಂದು ಮಿಕ್ಕ ಕುರುಡರಿಗೆ ನಾಯಕರಾಗಿ ನಿಂತರೆ ಆ ಮುಂದಾಳುಗಳಿಂದ ಅವರಿಗೆ ಯಾವ ಸಹಾಯವಾದೀತು? ಮುಂದಾಳುಗಳಿಗಾದರೂ ಯಾವ ಸುಖವಾದೀತು? ಹೀಗೆಯೇ ಶಾಸ್ತ್ರೀಯಕರ್ಮವನ್ನು ನೆಚ್ಚಿರುವವರ ಪಾಡು! ಅವರು ತಾವು ಎಷ್ಟೇ ಜಾಣರೆಂದು ತಿಳಿದುಕೊಂಡಿರಲಿ! ತಾವೂ ತಪ್ಪು ತಿಳಿವಿನ ಕತ್ತಲೆಯಲ್ಲಿ ಸಿಕ್ಕಿಬಿದ್ದಿರುತ್ತಾರೆ, ಇತರರನ್ನೂ ಕತ್ತಲೆಯಲ್ಲಿ ಸಂಕಟದಿಂದ ತೊಳಲುವಂತೆ ಹುರಿದುಂಬಿಸುತ್ತಿರುತ್ತಾರೆ. ಮಕ್ಕಳಿಗೆ ಯಾವದಾದರೊಂದು ಆಟದ ಸಾಮಾನು ಸಿಕ್ಕಿದರೆ ಸಾಕು, ಯಾವದಾದರೊಂದು ಥಳಗುಟ್ಟುವ ಕಾಗೆಬಂಗಾರವೋ ತವರದ ತುಂಡೋ ಸಿಕ್ಕಿದರೆ ಸಾಕು, ಕೂಡಲೆ ಹಿಗ್ಗಿಹಿಗ್ಗಿ ಸುರಿಯುತ್ತಾರೆ. ಅದರಂತೆಯೇ ಈ ಕರ್ಮಿಗಳು ಮೋಕ್ಷಮಾರ್ಗದಲ್ಲಿ ಇನ್ನೂ ಮಕ್ಕಳಾಗಿರುತ್ತಾರೆ; ಆದ್ದರಿಂದಲೇ ಅವರು ನಿಜವನ್ನರಿಯದೆ ತಮಗೆ ಸಿಕ್ಕ ಕರ್ಮಫಲಗಳಿಂದಲೇ ತಾವು ಕೃತಾರ್ಥರಾದೆವೆಂದು ತಿಳಿಯುತ್ತಾರೆ. ಇದಕ್ಕೇನು ಕಾರಣ? ಅವರಿಗೆ ಕರ್ಮಫಲದಲ್ಲಿರುವ ರಾಗವೇ. ಯಾವನಿಗೆ ಕರ್ಮಫಲದ ರಂಗು ಚಿತ್ತಕ್ಕೆ ಹತ್ತಿಕೊಳ್ಳುವದೋ ಅವನ ಮನಸ್ಸು ಚಂಚಲವಾಗಿರುತ್ತದೆ; ಅವನು ಎಷ್ಟು ಸ್ವಲ್ಪ ಫಲವು ಸಿಕ್ಕಿದರೂ ಅಷ್ಟಕ್ಕೇ ಹಿಗ್ಗುತ್ತಾನೆ. ಆದರೆ ಫಲದ ಯೋಗ್ಯತೆಯಂತೆ ಭೋಗವೂ ಅವರಿಗೆ ಕ್ಷಣಿಕವಾಗಿದ್ದರೆ ಆಶ್ಚರ್ಯವೇನು? ಅವರು ಇಗೋ, ಕರ್ಮಫಲವು ದಕ್ಕಿತು ! ಎಂದು ಇನ್ನೂ ಹಿಗ್ಗುತ್ತಿರುವಾಗಲೇ ಸ್ವರ್ಗದಿಂದ ಜಗುಳಿಬೀಳುತ್ತಾರೆ.

ಇಂಥ ಮೂಢರು ತಾವು ಏನು ಮಾಡುತ್ತಿದ್ದೇವೆಂಬುದನ್ನು ಅರಿಯರು; ಶಾಸ್ತ್ರದಲ್ಲಿ ಕರ್ಮವು ಯಾವ ಗುರಿಯಿಂದ ವಿಹಿತವಾಗಿದೆಯೆಂಬುದನ್ನೂ ಅರಿಯರು. ಅವರು ಕರ್ಮದಲ್ಲಿರುವ ಶಕ್ತಿಯ ಎಲ್ಲೆಕಟ್ಟನ್ನು ಅರಿಯರು, ಇದರ ತಳಗಟ್ಟು ಭದ್ರವಿಲ್ಲವೆಂಬುದನ್ನೂ ಅರಿಯರು; ಕರ್ಮಫಲವು ಎಷ್ಟೇ ಮನೋರಂಜಕವಾಗಿರಲಿ, ಅದು ಬಹುಕಾಲ ನಿಲ್ಲಲಾರದೆಂಬ ಗುಟ್ಟನ್ನೂ ಅರಿಯರು. ಮದ್ದಿನಮನೆಯ ಮೇಲುಮಹಡಿಯಲ್ಲಿ ನಿಂತು ಪಟಾಕಿಯನ್ನು ಹಾರಿಸುತ್ತಿರುವ ಹುಡುಗರಂತೆ ತಾವು ಏನು

ಮಾಡುತ್ತೇವೆಂಬುದನ್ನೇ ಅರಿಯದ ಆ ಪ್ರಮೂಢರಿಗೆ ಯಾಗವೇ ಮುಂತಾದ ಶ್ರೌತಕರ್ಮವಾದ ಇಷ್ಟ, ಕೆರೆಕಟ್ಟೆಭಾವಿಯೇ ಮುಂತಾದವನ್ನು ತೋಡಿಸುವದೇ ಮೊದಲಾದ ಸ್ಮಾರ್ತಕರ್ಮವಾದ ಪೂರ್ತ-ಇವೆರಡೇ ಅತ್ಯಂತ ಉತ್ತಮವಾದ ಶ್ರೇಯಃಸಾಧನವೆಂದು ಮನಸ್ಸಿಗೆ ತೋರುತ್ತದೆ. ಮತ್ತೊಂದು ಸಾಧನವು ಅವರ ಕಣ್ಣಿಗೆ ಹೊಳೆಯುವದೇ ಇಲ್ಲ.

ಇಷ್ಟಾಪೂರ್ತಗಳಿಗೆ ಫಲವಿಲ್ಲವೆಂದೇನೂ ನಮ್ಮ ಅಭಿಪ್ರಾಯವಲ್ಲ. ಶ್ರುತಿ ಸ್ಮೃತಿಗಳಲ್ಲಿ ಅವನ್ನು ಹೇಳಿರುವದು ನಿಜ ; ಅವನ್ನು ಶ್ರದ್ಧೆಯಿಂದಲೂ ನಿಯಮದಿಂದಲೂ ಮಾಡಿದರೆ ತಕ್ಕ ಫಲವಾಗುವದೆಂದು ನಂಬುವದರಲ್ಲಿ ಹಾನಿಯೇನೂ ಇಲ್ಲ. ಆದರೆ ಕರ್ಮಕ್ಕೆ ಇಷ್ಟೇ ಪರಮಗತಿಯೆಂದು ತಿಳಿದದ್ದು ಮಾತ್ರ ತಪ್ಪು. ಇದೇ ಪ್ರಮೂಢತನವು. ಬರಿಯ ಕರ್ಮವನ್ನು ಶ್ರದ್ಧೆಯಿಂದ ಮಾಡಿದಮಾತ್ರದಿಂದ ಸ್ವರ್ಗವು ದೊರಕಬಹದು; ಅಲ್ಲಿ ಬಹುಕಾಲ ಕರ್ಮದ ಫಲವನ್ನು ಹೊಂದಿ ಸುಖಿಸಲೂಬಹುದು. ಆದರೇನು? ಹಣ್ಣಿನ ಮರವನ್ನು ಬರಿಯ ನೆರಳಿಗೆಂದು ಯಾರಾದರೂ ಬೆಳೆಯಿಸುವರೆ? ಅಥವಾ ಅದನ್ನು ಇನ್ನೂ ಹಣ್ಣು ಬಿಡುವದರೊಳಗಾಗಿಯೇ ಸೌದೆಗೆ ಆದೀತೆಂದು ಕಡಿಯುವರೆ ! ಇಲ್ಲ. ಕರ್ಮದಿಂದ ಆಗುವ ಸ್ವರ್ಗಫಲವೇ ಹೆಚ್ಚಿನದೆಂದು ತಿಳಿದು ಕಾಮ್ಯಕರ್ಮದಲ್ಲಿ ನಿರತರಾಗುವವರ ದೃಷ್ಟಿಯು ನೆರಳಿಗಾಗಿ ಹಣ್ಣಿನ ಮರವನ್ನು ನೆಟ್ಟು ಸೌದೆಗಾಗಿ ಅದನ್ನು ಕಡಿಯುವವರ ದೃಷ್ಟಿಗಿಂತ ಮುಂದಕ್ಕೆ ಹಾಯುತ್ತಿರುವದಿಲ್ಲ. ಆದ್ದರಿಂದಲೇ ಅವರನ್ನು ಮೂಢರು, ಹುಡುಗರು, ಕುರುಡರು-ಎಂದು ಶ್ರುತಿಯು ಹಳಿಯುತ್ತದೆ.

ಕರ್ಮಕ್ಕೆ ಸತ್ಯವಾದ ಫಲವುಂಟು, ಆ ಫಲವನ್ನು ಕೊಡುವ ಶಕ್ತಿಬೀಜವೂ ಅದರಲ್ಲಿ ಅಡಗಿದೆ. ಆದರೆ ಫಲಕ್ಕಾಗಿ ಕರ್ಮವನ್ನು ಮಾಡುವವರಿಗೆ ಆ ಕರ್ಮವು ಕೊಡುವ ಫಲವು ಅನಿತ್ಯವೆಂಬುದು ಹೊಳೆಯದೆ ಇರುತ್ತದೆ. ಕೃತಕವಾದದ್ದು ನಿತ್ಯವಾಗಿ ಹೇಗಿದ್ದೀತು?-ಎಂಬ ಯೋಚನೆಯು ಅವರಲ್ಲಿ ಹುಟ್ಟದೆ ಇರುತ್ತದೆ. ಆದ್ದರಿಂದ ಅವರು ''ಕರ್ಮವೇ ಮಿಗಿಲಿಲ್ಲದ ಸಾಧನವು, ಕರ್ಮದ ಫಲವೇ ಮಿಗಿಲಿಲ್ಲದ ಶ್ರೇಯಸ್ಸು'' ಎಂದು ಹಿಗ್ಗುತ್ತಿರುತ್ತಾರೆ. ಆದರೆ ಕುಡಿಕೆಯ ಹಣವನ್ನು ಕೂತು ಅನುಭವಿಸಿದರೆ ಎಷ್ಟು ದಿನ ಬಂದೀತು? ಕರ್ಮದ ಫಲವು ತೀರಿದ ಮೇಲೆ ಸ್ವರ್ಗದಲ್ಲಿ ಒಂದು ಘಳಿಗೆಯೂ ಹೆಚ್ಚಾಗಿ ಇರುವದಕ್ಕೆ ಆಗಲಾರದು. ''ಏರಿದವನು ಇಳಿದಾನು, ತಾಗಿದವನು ಬಾಗಿಯಾನು'' ಎಂಬ ಗಾದೆಗಳು ಇಲ್ಲಿ ಅಕ್ಷರಶಃ ನಿಜವಾಗಿರುತ್ತವೆ. ಸ್ವರ್ಗವನ್ನು ಅನುಭವಿಸಿದ ಮೇಲೆ ಅವಶ್ಯವಾಗಿ ಮನುಷ್ಯನು ಮತ್ತೆ ಆ ಭೋಗಭೂಮಿಯಿಂದ ಜಾರಿಬೀಳಬೇಕು, ಮತ್ತೆ ಕರ್ಮಭೂಮಿಗೆ ಬರಲೇಬೇಕು.

ಕರ್ಮಭೂಮಿಗೆ ಬರುವದೆಂದರೆ ಮನುಷ್ಯಜನ್ಮವನ್ನು ಪಡೆಯುವದು. ಇಲ್ಲೊಂದು ವಿಶೇಷವುಂಟು ; ಸ್ವರ್ಗಲೋಕದಿಂದ ಬಿದ್ದವನು ಮರ್ತ್ಯಲೋಕಕ್ಕೆ ಬರುವದು ನಿಜ; ಆದರೆ ಮನುಷ್ಯನಾಗಿಯೇ ಹುಟ್ಟುವನೆಂಬ ಭರವಸೆಯೇನೂ ಇಲ್ಲ. ಹಿಂದಿನ ಕರ್ಮದಲ್ಲಿ ಯಾವದು ಫಲವನ್ನು ಕೊಡಬೇಕಾಗಿರುವದೋ ಆ ಫಲಕ್ಕೆ ತಕ್ಕ ಜನ್ಮದಲ್ಲಿ ಹುಟ್ಟುವನೆಂಬುದೊಂದೇ ನಿಯಮವು ತಪ್ಪದೆ ನಡೆಯುತ್ತದೆ. ಆದ್ದರಿಂದ ಸಂಚಿತಕರ್ಮದ ರಾಶಿಯಲ್ಲಿ ಯಾವ ಭಾಗವು ಎದ್ದುಕೊಳ್ಳುವದೋ ಅದಕ್ಕೆ ತಕ್ಕಂತೆ ಈ ಮನುಷ್ಯಲೋಕವನ್ನಾದರೂ ಪಡೆಯಬಹುದು. ಇಲ್ಲದಿದ್ದರೆ ಪಾಪಕರ್ಮವು ಹೆಚ್ಚಾಗಿ ಅದೇ ಮೊಳಕೆಯಾಗಬೇಕಾಗಿದ್ದರೆ ಇನ್ನೂ ಕೀಳಾದ ಜನ್ಮವನ್ನಾದರೂ ಪಡೆಯಬಹುದು. ಹೀಗಿದೆ, ಕರ್ಮದ ವಿಚಿತ್ರಗತಿ !



## 7. ಕರ್ಮೋಪಾಸನಾಸಮುಚ್ಚಯದ ಫಲ

**ತಪಃಶ್ರದ್ಧೇ ಯೇ ಹ್ಯುಪವಸನ್ತ್ಯರಣ್ಯೇ ಶಾನ್ತಾ ವಿದ್ವಾಂಸೋ**
**ಭೈಕ್ಷ್ಯಚರ್ಯಾಂ ಚರನ್ತಃ ।**
**ಸೂರ್ಯದ್ವಾರೇಣ ತೇ ವಿರಜಾಃ**
**ಪ್ರಯಾನ್ತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ॥11॥**

*"ಯಾರು ಅರಣ್ಯದಲ್ಲಿ ಶಾಂತರಾಗಿ ವಿದ್ವಾಂಸರಾಗಿ ಭೈಕ್ಷ್ಯಚರ್ಯೆಯನ್ನು ಮಾಡುತ್ತಾ ತಪಸ್ಸನ್ನೂ ಶ್ರದ್ಧೆಯ ಉಪಾಸನೆಯನ್ನೂ ನಡೆಯಿಸುತ್ತಿರುವರೋ, ಅವರು ಧೂಳಿಲ್ಲದವರಾಗಿ ಅಮೃತನೂ ಅವ್ಯಯಸ್ವರೂಪನೂ ಆದ ಆ ಪುರುಷನು ಎಲ್ಲಿರುವನೋ ಅಲ್ಲಿಗೆ ತೆರಳುವರು."*

ಪರವಿದ್ಯೆ, ಅಪರವಿದ್ಯೆ–ಎಂದು ವೈದಿಕವಿದ್ಯೆಯನ್ನು ಎರಡು ದೊಡ್ಡ ಭಾಗಗಳಾಗಿ ವಿಂಗಡಿಸಿದ್ದಾಯಿತು. ಇವುಗಳಲ್ಲಿ ಅಪರವಿದ್ಯೆಯಲ್ಲಡಗಿರುವ ಸತ್ಯತ್ವವನ್ನು ತಿಳಿಸುವದಕ್ಕೆಂದು ಅದರ ಒಂದು ಭಾಗವಾದ ಕರ್ಮವನ್ನೂ ಅದರ ಫಲವನ್ನೂ ವಿವರಿಸಿ ಕರ್ಮದ ಶಕ್ತಿಯ ಎಲ್ಲೆಕಟ್ಟನ್ನು ತಿಳಿದುಕೊಂಡದ್ದಾಯಿತು. ಕರ್ಮವು ಸತ್ಯವೇ ಆಗಿರುವ ಫಲವನ್ನು ಕೊಡುತ್ತದೆಯಾದರೂ ಅದಕ್ಕೊಂದು ಎಲ್ಲೆಕಟ್ಟಿದೆ. ಆ ಫಲವು ಕರ್ಮದ ವೀರ್ಯಕ್ಕೆ ತಕ್ಕಷ್ಟು ಕಾಲವು ಮಾತ್ರ ಇದ್ದು ಆಮೇಲೆ ಕ್ಷಯಿಸತಕ್ಕದ್ದಾಗಿದೆ. ಇದೂ ಅಲ್ಲದೆ ಕರ್ಮದಿಂದ ಸಿಕ್ಕುವ ಸ್ವರ್ಗರೂಪವಾದ ಫಲವು ಎಷ್ಟೇ ಸುಖವನ್ನು ಕೊಡಲಿ, ಅದು ನಿತ್ಯವಾಗಿ ಎಂದೆಂದಿಗೂ ಇರತಕ್ಕದ್ದಲ್ಲ; ಆ ಫಲವು ಮುಗಿದ ಮೇಲೆ ನಾವು ಈಗಿನ ಮಾನುಷಜನ್ಮಕ್ಕೇ ಹಿಂತಿರುಗುವೆವೆಂಬ ನಿಯಮವೂ ಇಲ್ಲ–ಎಂಬುದನ್ನೂ ಕಂಡುಕೊಂಡದ್ದಾಯಿತು. ಇನ್ನು ಅಪರವಿದ್ಯೆಯ ಮತ್ತೊಂದು ಭಾಗವಾದ ಉಪಾಸನೆಯ ಸ್ವರೂಪವನ್ನೂ ಅದರ ಫಲವನ್ನೂ ಆ ಫಲದ ಎಲ್ಲೆಕಟ್ಟನ್ನು ತಿಳಿದುಕೊಳ್ಳಬೇಕಾಗಿರುತ್ತದೆ. ಅದರ ವಿವರವು ಈ ಮಂತ್ರದಲ್ಲಿ ಕಂಡುಬರುತ್ತದೆ.

ಕರ್ಮವು ಹೇಗೆ ಅಪರವಿದ್ಯೆಯೋ ಉಪಾಸನೆಯೂ ಹಾಗೆಯೇ ಅಪರವಿದ್ಯೆಯಾಗಿರುತ್ತದೆ. ಕರ್ಮವು ಕ್ರಿಯಾರೂಪವಾಗಿರುವಂತೆಯೇ ಉಪಾಸನೆಯೂ ಕ್ರಿಯಾರೂಪವಾಗಿರುತ್ತದೆ. ಆದರೆ ಕರ್ಮವು ಬಾಹ್ಯವಾಗಿರುತ್ತದೆ. ಶರೀರದಿಂದ ಆಗತಕ್ಕದ್ದಾಗಿರುತ್ತದೆ; ಉಪಾಸನೆಯು ಅಂತರಂಗವಾಗಿರುತ್ತದೆ, ಮನಸ್ಸಿನಿಂದ ನಡೆಯತಕ್ಕದ್ದಾಗಿರುತ್ತದೆ. ಇದಿಷ್ಟೇ ಇವುಗಳೆರಡಕ್ಕೂ ಇರುವ ಭೇದವು.

ಶಾರೀರಕರ್ಮಕ್ಕೂ ಮಾನಸಕರ್ಮವಾದ ಉಪಾಸನೆಗೂ ವಿರೋಧವಿದೆಯೆ? ಇಲ್ಲ. ಏಕೆಂದರೆ ಶರೀರದಿಂದ ಮಾಡುವ ಕರ್ಮಕ್ಕೂ ಮೊದಲು ಮನಸ್ಸಿನಲ್ಲಿ ಆ ಕರ್ಮದ ಸ್ವರೂಪವನ್ನು ನೆನಸಿಕೊಳ್ಳಬೇಕು; ಕರ್ಮವನ್ನು ಮಾಡುವಾಗ ಶ್ರದ್ಧೆಯಿಂದ ಮಾಡಬೇಕು. ಕೆಲವು ವೇಳೆಗಳಲ್ಲಿ ಕರ್ಮವನ್ನು ಮಾಡುವಾಗಲೇ ಆಯಾ ದೇವತೆಯನ್ನು ಮನಸ್ಸಿನಿಂದ ಧ್ಯಾನಮಾಡಿಕೊಂಡು ಮಾಡಬೇಕಾಗುತ್ತದೆ. ಆದ್ದರಿಂದ ಹೊರಗಿನ ಕರ್ಮವನ್ನು ಮಾಡುವಾಗಲೂ ಉಪಾಸನೆಯನ್ನು ಅದರ ಅಂಗವಾಗಿ ನಡೆಯಿಸಬಹುದಾಗಿರುತ್ತದೆ. ಹೀಗೆಯೇ ಉಪಾಸನೆಯನ್ನು ಮಾಡುವದಕ್ಕೆ ಮೊದಲು ಹೊರಗಿನ ಕರ್ಮಗಳನ್ನು ಮಾಡಿಕೊಂಡು ಅದರ ಸಹಾಯದಿಂದ ಮನಸ್ಸಿನಲ್ಲಿ ಧ್ಯಾನಮಾಡಬಹುದಾಗಿರುತ್ತದೆ. ಯಾರಿಗೆ ಶಾಸ್ತ್ರೀಯಕರ್ಮವನ್ನು ಮಾಡಿಮಾಡಿ ಸ್ವಾಭಾವಿಕವಾದ ಲೌಕಿಕ ವಿಚಾರಗಳ ಕಡೆಯಿಂದ ಚಿತ್ತವನ್ನು ಈಚೆಗೆ ಎಳೆದುಕೊಳ್ಳುವದಕ್ಕೆ ಸಾಮರ್ಥ್ಯವು ಬಂದಿರುವದೋ ಅವರಿಗೇ ಚಿತ್ತವನ್ನು ಇನ್ನಷ್ಟು ಒಳಕ್ಕೆ ಸರಿಯಿಸಿಕೊಂಡು ಉಪಾಸನೆಯನ್ನು ಮಾಡುವ ಶಕ್ತಿಯುಂಟಾಗುತ್ತದೆ. ಆದ್ದರಿಂದ ಕರ್ಮವು ಉಪಾಸನೆಗೂ ಅಂಗವಾಗಿರಬಹುದಾಗಿರುತ್ತದೆ. ಈ ಕಾರಣಗಳಿಂದ ಉಪಾಸನೆಯನ್ನು ಯಾವ ವರ್ಣದಲ್ಲಿ ಯಾವ ಆಶ್ರಮದಲ್ಲಿ ಬೇಕಾದರೂ ಆಯಾ ವರ್ಣದ ಆಯಾ ಆಶ್ರಮದ ಕರ್ಮದ ಜೊತೆಗೂ ಮಾಡಬಹುದೆಂದು ಹೇಳಬಹುದಾಗಿದೆ. ಕರ್ಮಕ್ಕೆ ಯಾವಯಾವ ನಿಯಮಗಳಿರುವವೋ ಬಹುಮಟ್ಟಿಗೆ ಉಪಾಸನೆಗೂ ಆಯಾ ನಿಯಮಗಳೇ ಇರುತ್ತವೆ ; ಆದರೆ ಉಪಾಸನೆಯು ಮಾನಸಕರ್ಮವಾದ್ದರಿಂದ ಅದಕ್ಕೆ ತಕ್ಕಂತೆ ಕೆಲವು ವಿಶೇಷನಿಯಮಗಳು ಏರ್ಪಟ್ಟಿರುತ್ತವೆ. ಇದಿಷ್ಟೇ ಕರ್ಮೋಪಾಸನೆಗಳಿಗೆ ಇರುವ ತಾರತಮ್ಯವು.

ಬರಿಯ ಕರ್ಮವನ್ನು ಮಾಡುವವರಿಗೂ ಅಥವಾ ಕರ್ಮಕ್ಕೆ ಅಂಗವಾಗಿ ಉಪಾಸನೆಯನ್ನಿಟ್ಟುಕೊಂಡಿರುವವರಿಗೂ ಆಗುವ ಫಲವನ್ನೂ ಅದರ ಎಲ್ಲೆಕಟ್ಟನ್ನೂ ಹಿಂದಿನ ಮಂತ್ರಗಳಲ್ಲಿ ತಿಳಿಸಿದ್ದೇ ಆಗಿರುತ್ತದೆ. ಉಪಾಸನೆಯೇ ಮುಖ್ಯವಾಗಿದ್ದು ಆಶ್ರಮಕರ್ಮವನ್ನು ಅದಕ್ಕೆ ಅಂಗವಾಗಿಟ್ಟುಕೊಂಡಿರುವವರಿಗೆ ಸಿಕ್ಕುವ ಫಲವೇನು? ಅದರ ಎಲ್ಲೆಕಟ್ಟು ಯಾವದು?–ಎಂಬುದನ್ನು ಈಗ ತಿಳಿಸುವದಕ್ಕೆ ಹೊರಟಿರುತ್ತದೆ.

ಗೃಹಸ್ಥರು ತಮ್ಮ ಕರ್ಮವನ್ನು ಮಾಡಿಕೊಂಡು ಉಳಿದ ಕಾಲದಲ್ಲಿ ಉಪಾಸನೆಮಾಡಬಹುದು, ವಾನಪ್ರಸ್ಥರೂ ಸಂನ್ಯಾಸಿಗಳೂ ತಮ್ಮತಮ್ಮ ಆಶ್ರಮಕ್ಕೆ ಉಕ್ತವಾಗಿರುವ ಆಚರಣೆಗಳನ್ನಿಟ್ಟುಕೊಂಡು ಉಪಾಸನೆಮಾಡಬಹುದು. ಹೀಗೆ ಉಪಾಸನೆಯನ್ನೇ ಪ್ರಧಾನವಾಗಿಟ್ಟುಕೊಂಡಿರುವ ವಾನಪ್ರಸ್ಥರೂ ಸಂನ್ಯಾಸಿಗಳೂ ಅರಣ್ಯದಲ್ಲಿವಾಸಮಾಡುತ್ತಿರುತ್ತಾರೆ. ವಾನಪ್ರಸ್ಥರಿಗೆ ಕೃಚ್ಛ್ರ, ಚಾಂದ್ರಾಯಣ–ಮುಂತಾದ

ತಪಸ್ಸುಗಳು ಕರ್ಮಸ್ಥಾನದಲ್ಲಿ ಮುಖ್ಯವಾಗಿರುತ್ತವೆ ; ಸಂನ್ಯಾಸಿಗಳಿಗೆ ಶಮದಮಾದಿಗಳೇ ಮುಖ್ಯವಾಗಿರುತ್ತವೆ. ಮನಸ್ಸನ್ನೂ ಇಂದ್ರಿಯಗಳನ್ನೂ ಏಕಾಗ್ರವಾಗಿಟ್ಟುಕೊಳ್ಳುವದೆಂಬ ತಪಸ್ಸು ಎಲ್ಲರಿಗೂ ಸಮಾನವಾಗಿರುತ್ತದೆ. ಗೃಹಸ್ಥರಿಗೆ ತಮ್ಮದೆಂಬ ಸ್ವತ್ತು ಇರುವದರಿಂದ ಅವರು ದಾನಧರ್ಮಪರೋಪಕಾರಗಳಿಂದ ಚಿತ್ತಶುದ್ಧಿಯನ್ನು ಮಾಡಿಕೊಳ್ಳುತ್ತಾ ಉಪಾಸನೆಯನ್ನು ಮಾಡುತ್ತಿರುತ್ತಾರೆ; ವಾನಪ್ರಸ್ಥರಿಗೂ ಸಂನ್ಯಾಸಿಗಳಿಗೂ ಸ್ವತ್ತು ಯಾವದೂ ಇಲ್ಲದಿರುವದರಿಂದ ಅವರು ಭಿಕ್ಷಾಚರ್ಯೆಯಿಂದಲೇ ಪ್ರಾಣಧಾರಣೆಯನ್ನು ಮಾಡಿಕೊಂಡು ತಮ್ಮ ಆಶ್ರಮಕರ್ಮದಿಂದಲೇ ಚಿತ್ತಶುದ್ಧಿಯನ್ನು ಮಾಡಿಕೊಂಡು ಉಪಾಸನೆಮಾಡುತ್ತಿರುತ್ತಾರೆ. ಮುಖ್ಯವಾಗಿ ದೇಹಾತ್ಮಬುದ್ಧಿಯನ್ನು ಕಳೆದುಕೊಳ್ಳುವದು, ಇಂದ್ರಿಯನಿಗ್ರಹ, ಮನೋನಿಗ್ರಹ–ಇವೆಲ್ಲವೂ ಉಪಾಸನೆಗೆ ಬೇಕಾಗಿರುವ ಸಹಕಾರಿಗಳಾಗಿರುತ್ತವೆ.

ಇಂಥ ಉಪಾಸಕರಿಗೆ ಆಗುವ ಫಲವು ಯಾವದು?–ಎಂದರೆ ಉಪಾಸ್ಯವಾದ ದೇವತೆಯನ್ನು ಪಡೆಯುವದು. ಉಪಾಸನೆಗಳಲ್ಲಿ ಅನೇಕ ಪ್ರಕಾರಗಳುಂಟು. ಕೆಲವಕ್ಕೆ ಕರ್ಮಸಮೃದ್ಧಿಯೇ ಫಲವು, ಕೆಲವಕ್ಕೆ ಇಷ್ಟಾರ್ಥಸಿದ್ಧಿಯೇ ಫಲವು, ಮತ್ತೆ ಕೆಲವಕ್ಕೆ ಕ್ರಮಮುಕ್ತಿಯೇ ಫಲವು. ಉಪಾಸನೆಗಳಲ್ಲೆಲ್ಲ ತೀರ ಹೆಚ್ಚಿನ ಉಪಾಸನೆಯೆಂದರೆ ಕಾರ್ಯಬ್ರಹ್ಮಲೋಕವನ್ನು ಕೊಡುವ ಉಪಾಸನೆ. ಆ ಬಗೆಯ ಉಪಾಸನೆಯಿಂದ ಉತ್ತರಾಯಣಮಾರ್ಗವೆಂಬ ಒಂದಾನೊಂದು ಮಾರ್ಗದ ಗತಿಯು ದೊರಕುವದೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ; ಉತ್ತರಾಯಣಮಾರ್ಗದಿಂದ ಹೋಗುವ ಉಪಾಸಕರು ಸೂರ್ಯಮಂಡಲವನ್ನು ಭೇದಿಸಿಕೊಂಡು ಹೋಗಿ ಬ್ರಹ್ಮಲೋಕವನ್ನು ಮುಟ್ಟುವರು.

ಬ್ರಹ್ಮಲೋಕವೆಂಬುದು ಅಪರವಿದ್ಯೆಗೆ ದೊರಕುವ ತೀರ ಹೆಚ್ಚಿನ ಫಲವು. ಆ ಲೋಕದಲ್ಲಿ ಹಿರಣ್ಯಗರ್ಭನೆಂದು ಹೆಸರಿನ ಬ್ರಹ್ಮನು ಸರ್ವರಿಗೂ ಅಧಿಪತಿಯಾಗಿರುತ್ತಾನೆ, ಆ ಲೋಕದಲ್ಲಿರುವವರಿಗೆಲ್ಲ ಸಾತ್ತ್ವಿಕಬುದ್ಧಿಯು ಸ್ವಭಾವವಾಗಿರುತ್ತದೆ, ಮರ್ತ್ಯಲೋಕದಲ್ಲಿರುವ ಈತಿಬಾಧೆಗಳಿಲ್ಲದ್ದರಿಂದ ಅಲ್ಲಿ ಆನಂದವು ಮಿಗಿಲಿಲ್ಲವೆನ್ನುವಷ್ಟು ಇರುತ್ತದೆ; ತತ್ತ್ವವಿಚಾರದಿಂದ ಜ್ಞಾನವನ್ನು ಹೊಂದುವದಕ್ಕೆ ಬೇಕಾದ ಅನುಕೂಲಗಳೆಲ್ಲವೂ ಇರುತ್ತವೆ. ಬ್ರಹ್ಮಲೋಕವು ಬ್ರಹ್ಮಕಲ್ಪವಾಗುವವರೆಗೂ ನಿಲ್ಲುವದಾದ್ದರಿಂದ ಚಿರಕಾಲ ಸುಖವನ್ನು ಪಡೆದು, ಜ್ಞಾನವನ್ನು ಪಡೆದಿದ್ದರೆ ಮತ್ತೆ ಸಂಸಾರಕ್ಕೆ ಮರಳುವ ಅವಶ್ಯಕತೆಯೇ ಇಲ್ಲದೆ, ಬ್ರಹ್ಮನೊಡನೆಯೇ ಪರಮಮುಕ್ತಿಯನ್ನೂ ಪಡೆಯಬಹುದು. ಆದ್ದರಿಂದ ಇದಕ್ಕೆ ಸತ್ಯಲೋಕವೆಂದೂ ಹೆಸರುಂಟು. ಹೀಗೆಂದು ಶಾಸ್ತ್ರದಲ್ಲಿ ವಿವರಿಸಿರುತ್ತದೆ.

ಇದುವರೆಗೆ ಹೇಳಿದ್ದರ ಒಟ್ಟು ಅಭಿಪ್ರಾಯವು ಇಷ್ಟು ; ಸ್ವಾಭಾವಿಕವಾದ ಅಜ್ಞಾನದ ಫಲವಾಗಿ ಮನುಷ್ಯರು ತಮಗೆ ತಿಳಿದಂತೆ ಕರ್ಮವನ್ನು ಮಾಡಿ ಪಾಪದ ಫಲವಾಗಿ ಕ್ಷುದ್ರಜಂತುಗಳ ಜನ್ಮವನ್ನು ಪಡೆಯುತ್ತಿರುವರು. ವಿವೇಕಿಗಳು ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡಿದ್ದರ ಫಲವಾಗಿ ಸ್ವರ್ಗಲೋಕಕ್ಕೆ ಹೋಗಿ ಕೆಲವು ಕಾಲದವರೆಗೆ ಸುಖವನ್ನನುಭವಿಸಿ ಮತ್ತೆ ಈ ಲೋಕಕ್ಕೆ ಬಂದು ತಮ್ಮ ತಮ್ಮ ಕರ್ಮವಾಸನೆಗೆ ಅನುಗುಣವಾದ ಜನ್ಮವನ್ನು ಪಡೆಯುವರು. ಆದರೆ ಉಪಾಸನೆಯ ಫಲವು ಮಿಕ್ಕ ಕರ್ಮಗಳೆಲ್ಲಕ್ಕಿಂತಲೂ ಅತಿಶಯಸುಖವನ್ನು ಕೊಡುವದಾಗಿರುತ್ತದೆ. ಏಕೆಂದರೆ ಮನುಷ್ಯನಿಗೆ ತಮಸ್ಸಿನ ಮುಸುಕು ಹೆಚ್ಚಿ ರಜಸ್ಸಿನ ಕ್ಲೇಶವು ಬೆಳೆದಹಾಗೆಲ್ಲ ಕಾಮಕ್ರೋಧಗಳ ಉಪಟಳದ ಫಲವಾಗಿ ಸುಖವು ಕಣ್ಮರೆಯಾಗಿ ದುಃಖವು ಮೈಯುಬ್ಬಿಕೊಂಡು ತೋರಿಕೊಳ್ಳುತ್ತಿರುತ್ತದೆ. ಶಾಸ್ತ್ರೀಯಕರ್ಮದಿಂದಲೂ ಉಪಾಸನೆಯಿಂದಲೂ ರಜಸ್ತಮಗಳ ಹಾವಳಿಯು ಕಡಿಮೆಯಾಗಿ ಸತ್ತ್ವದ ಬೆಳವಣಿಗೆಯೂ ಹೆಚ್ಚುವದರಿಂದ ಜ್ಞಾನವೈರಾಗ್ಯಗಳೂ ಸುಖವೂ ಹೆಚ್ಚುಹೆಚ್ಚಾಗಿ ಮೈದೋರಿಕೊಳ್ಳುವವು. ಇಂಥ ಸಾತ್ತ್ವಿಕಗತಿಗಳಲ್ಲೆಲ್ಲ ಹೆಚ್ಚಿನದು ಯಾವದೆಂದರೆ ಹಿರಣ್ಯಗರ್ಭನೆಂಬ ಹೆಸರಿನ ಕಾರ್ಯಬ್ರಹ್ಮದ ಲೋಕವು. ಅಲ್ಲಿ ಸತ್ತ್ವವು ಇನ್ನಿಲ್ಲವೆಂಬಷ್ಟು ಹೆಚ್ಚಿರುವದರಿಂದ ಐಶ್ವರ್ಯಜ್ಞಾನವೈರಾಗ್ಯಸುಖಗಳು ಇನ್ನಿಲ್ಲವೆಂಬಷ್ಟು ಪ್ರಕಟವಾಗುತ್ತವೆ. ಆದ್ದರಿಂದ ಸಗುಣಬ್ರಹ್ಮೋಪಾಸನೆಯಿಂದ ಸಿಕ್ಕುವ ಸತ್ಯಲೋಕವೇ ಸಾತ್ತ್ವಿಕ ಗತಿಗಳಲ್ಲೆಲ್ಲ ಶ್ರೇಷ್ಠವೆಂದು ಶ್ರುತಿಸ್ಮ''ತಿಗಳು ಮೊಳಗುತ್ತಿರುವವು.

ಇನ್ನು ಈ ಉಪಾಸನೆಯ ಫಲವಾದ ಬ್ರಹ್ಮಲೋಕಕ್ಕಿಂತಲೂ ಹೆಚ್ಚಿನ ಫಲವಾದದ್ದು ಯಾವದಾದರೂ ಇದೆಯೆ? ಪರವಿದ್ಯೆಯ ಫಲವು ಇದಕ್ಕಿಂತ ಯಾವ ಬಗೆಯಲ್ಲಿ ಹೆಚ್ಚಾಗಿರುತ್ತದೆ?–ಎಂಬುದನ್ನು ನಾವು ವಿಚಾರಕ್ಕೆ ತೆಗೆದುಕೊಳ್ಳಬೇಕಾಗಿರುತ್ತದೆ. ಸದ್ಯಕ್ಕೆ ಇಷ್ಟನ್ನು ನೆನಪಿಡುವದು ಒಳ್ಳೆಯದು ; ಉಪಾಸನೆಯಿಂದ ಸಿಕ್ಕುವ ತೀರಹೆಚ್ಚಿನ ಫಲವು ಸಾಧನಗಳಿಂದ ದೊರಕುವ ಫಲಗಳಲ್ಲೆಲ್ಲ ಹೆಚ್ಚಿನ ಸುಖವನ್ನು ಕೊಡತಕ್ಕದ್ದು, ಅಂಥ ಫಲಗಳಲ್ಲೆಲ್ಲ ಇದೇ 'ಸತ್ಯ' ಎನ್ನಿಸಿಕೊಳ್ಳುವದಕ್ಕೆ ಹೆಚ್ಚು ಅರ್ಹವಾದದ್ದು. ಇದನ್ನು ಪಡೆದರೆ ಅಪರವಿದ್ಯೆಯ ಫಲದ ಕ್ಷೇತ್ರದ ತೀರ ಕೊನೆಯ ಗಡಿಯನ್ನು ನಾವು ಮುಟ್ಟಿದಂತೆ ಆಯಿತು.



# 8. ಪರವಿದ್ಯಾರಂಭ: ಗುರುಶಿಷ್ಯಲಕ್ಷಣ

ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ
ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ ।
ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್
ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥12॥

ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್
ಪ್ರಶಾನ್ತಚಿತ್ತಾಯ ಶಮಾನ್ವಿತಾಯ ।
ಯೇನಾಕ್ಷರಂ ಪುರುಷಂ ವೇದ ಸತ್ಯಂ
ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್ ॥13॥

*"ಬ್ರಾಹ್ಮಣನು ಕರ್ಮದಿಂದಾಗುವ ಲೋಕಗಳನ್ನು ಪರೀಕ್ಷಿಸಿ 'ಸಾಧನದಿಂದ ಅಕೃತವಾದದ್ದು ಆಗಲಾರದು' ಎಂದು ವೈರಾಗ್ಯವನ್ನು ಹೊಂದಬೇಕು. ಅವನು ಅದನ್ನು ತಿಳಿದುಕೊಳ್ಳುವದಕ್ಕೆ ಸಮಿತ್ಪಾಣಿಯಾಗಿ ಗುರುವಿನ ಬಳಿಗೇ ಹೋಗಬೇಕು. ಹೀಗೆ ಚೆನ್ನಾಗಿ ಚಿತ್ತಶಾಂತಿಯನ್ನು ಹೊಂದಿ ಶಮಾನ್ವಿತನಾಗಿ ತನ್ನ ಬಳಿಗೆ ಬಂದಿರುವ ಅವನಿಗೆ ಆ ಜ್ಞಾನಿಯು ಅಕ್ಷರವೆಂಬ ಸತ್ಯವನ್ನು ಯಾವದರಿಂದ ತಿಳಿದುಕೊಳ್ಳಬಹದೋ ಅಂಥ ಬ್ರಹ್ಮವಿದ್ಯೆಯನ್ನು ಇದ್ದದ್ದು ಇದ್ದಂತೆ ಹೇಳಿಕೊಡಬೇಕು."*

ಇದುವರೆಗೆ ಅಪರವಿದ್ಯೆಯ ಸ್ವರೂಪವನ್ನೂ ಅದರ ಫಲವನ್ನೂ ಆ ಫಲದ ಎಲ್ಲೆಕಟ್ಟನ್ನೂ ತಿಳಿಸಿಕೊಟ್ಟಂತೆ ಆಯಿತು. ಅಪರವಿದ್ಯೆಯ ಫಲವು ಸತ್ಯವಾಗಿ ಆಗಿಯೇತೀರುವದರಿಂದ ಸತ್ಯವಾಗಿರುತ್ತದೆ. ಆ ಫಲವು ಸತ್ಯವಾಗಿಯೂ ಸುಖಾನುಭವವನ್ನು ಕೊಡುವದರಿಂದಲೂ ಅದು ಸತ್ಯವಾಗಿರುತ್ತದೆ. ಆದರೇನು? ಆ ಸತ್ಯರೂಪವಾದ ಫಲಕ್ಕೂ ಒಂದು ಎಲ್ಲೆಕಟ್ಟು ಇದೆ. ಅದು ಸಾಧನದಿಂದ ಬಂದದ್ದಾದ್ದರಿಂದ ಸಾಧನದ ಯೋಗ್ಯತೆಯನ್ನು ಅನುಸರಿಸಿ ಸತ್ಯವಾಗಿರುತ್ತದೆಯೇ ಹೊರತು ಪರಮಾರ್ಥವಾಗಿ ಸತ್ಯವಾಗಿರತಕ್ಕದ್ದಲ್ಲ. ಬರಿಯ ಕರ್ಮದಿಂದ ಪಡೆಯುವ ಸ್ವರ್ಗವು ಕರ್ಮದ ವೀರ್ಯಕ್ಕೆ ತಕ್ಕಷ್ಟು ಕಾಲ ಮಾತ್ರ ಸುಖವನ್ನು ಕೊಡುತ್ತದೆ; ಕರ್ಮೋಪಾಸನೆಗಳಿಂದ ಪಡೆಯಬಹುದಾದ ಬ್ರಹ್ಮಲೋಕವು ಕಲ್ಪಾಂತರದವರೆಗೆ ಮಾತ್ರ ಇರಬಲ್ಲದ್ದಾಗಿರುತ್ತದೆ. ಸಾಧನದಿಂದ ಸಿಕ್ಕುವ ಯಾವದೂ ನಿತ್ಯವಾಗಿ ಇರಲಾರದು; ಕೃತವಾದದ್ದು ಕೃತಕವಾಗಿಯೇ ಇರುತ್ತದೆ. ಈ ಗುಟ್ಟನ್ನು ಯಾವನು ತಿಳಿಯಬಲ್ಲನೋ,

ಯಾವನು ಸಾಧ್ಯಸಾಧನರೂಪವಾದ ಸಂಸಾರದಿಂದ ಬೇಸತ್ತು, "ನನಗೆ ಕೃತಕವಾದ ಫಲವು ಬೇಕಿಲ್ಲ ; ನಿತ್ಯವಾಗಿರುವ ಪರಮಾರ್ಥವೇ ಬೇಕು" ಎಂದು ಹಾತುವರಿಯುತ್ತಿರುವನೋ ಅವನೇ ಮುಮುಕ್ಷು, ಅಜ್ಞಾನದಿಂದಾಗಿರುವ ಬಂಧದ ಬಿಗಿತವನ್ನು ಬಿಚ್ಚಿಕೊಳ್ಳಬೇಕೆಂಬ ತವಕವುಳ್ಳ ಜಿಜ್ಞಾಸು—ಎನ್ನಿಸಿಕೊಳ್ಳುತ್ತಾನೆ.

ಮುಮುಕ್ಷುವಾದವನು ಸರ್ವವನ್ನೂ ತ್ಯಾಗಮಾಡಿ ಬ್ರಹ್ಮವಿದ್ಯೆಗಾಗಿಯೇ ತನ್ನ ಜೀವಿತವನ್ನೆಲ್ಲ ಕಳೆಯಬೇಕಾಗುತ್ತದೆಯಷ್ಟೆ. ಹೀಗೆ ಕಳೆಯುವದು ಬ್ರಾಹ್ಮಣನಾದವನಿಗೇ ವಿಶೇಷವಾಗಿ ಸಾಧ್ಯವು. ಏಕೆಂದರೆ ಬ್ರಾಹ್ಮಣನಿಗೆ ತನ್ನದಾಗಿರುವ ಸ್ವತ್ತು ತೀರ ಸ್ವಲ್ಪವಾಗಿರುತ್ತದೆ; ಅವನಿಗೆ ಅಧ್ಯಯನಾದಿಗಳೇ ಮುಖ್ಯಕರ್ಮವಾಗಿರುತ್ತವೆ, ಶಾಂತಿ ದಾಂತಿ ಮುಂತಾದವುಗಳೂ ಅವನಿಗೆ ಸ್ವಾಭಾವಿಕವಾಗಿರುತ್ತವೆ. ಕ್ಷತ್ರಿಯವೈಶ್ಯರಿಗೆ ಹೀಗಿರುವದಿಲ್ಲ. ಆದ್ದರಿಂದ ತ್ರೈವರ್ಣಿಕರಲ್ಲಿ ಸರ್ವಕರ್ಮಸಂನ್ಯಾಸಪೂರ್ವಕವಾಗಿ ತತ್ತ್ವವಿಚಾರವನ್ನು ಮಾಡುವದಕ್ಕೆ ಬ್ರಾಹ್ಮಣನಿಗೇ ವಿಶೇಷಾಧಿಕಾರವಿರುವದೆಂಬುದನ್ನು "ಬ್ರಾಹ್ಮಣ"ನೆಂಬ ಶಬ್ದದಿಂದ ಮಂತ್ರದಲ್ಲಿ ತಿಳಿಸಿರುತ್ತದೆಯೇ ಹೊರತು ಇತರರಿಗೆ ಅಧಿಕಾರವಿಲ್ಲವೆಂಬುದೇನೂ ಅಲ್ಲ.

ಈ ಸಂಸಾರದಲ್ಲಿ ಸಾಧನದಿಂದಾಗಿ ಅಕೃತವಾಗಿರುವದು ಯಾವದೊಂದೂ ಇರುವದಿಲ್ಲ—ಎಂಬುದನ್ನು ಅರಿತವನು ಸ್ವಾಭಾವಿಕವಾಗಿ ವಿರಕ್ತನಾಗುತ್ತಾನಷ್ಟೆ. ಅಂಥವನಿಗೆ ನಿತ್ಯವಾಗಿ ಕೂಟಸ್ಥವಾಗಿರುವ ಪರಮಾರ್ಥವು ಯಾವದು?—ಎಂಬುದನ್ನು ತಿಳಿಯುವ ಕುತೂಹಲವುಂಟಾಗುತ್ತದೆ. ಆಗ ಅವನು ಏನು ಮಾಡಬೇಕು? ಗುರುವಿನ ಬಳಿಗೇ ಹೋಗಬೇಕು. ತಾನು ಶಾಸ್ತ್ರಗಳನ್ನು ಬಲ್ಲವನಾದರೂ ತಾನೇ ತತ್ತ್ವವನ್ನು ತಿಳಿದುಕೊಂಡೇನೆಂದು ನಂಬಬಾರದು. ತತ್ತ್ವವೆಂಬುದು ಕೇವಲ ಪುರುಷಬುದ್ಧಿಗಮ್ಯವಲ್ಲ, ಅದು ಶಾಸ್ತ್ರದ ಸಾರವನ್ನು ಬಲ್ಲವನಾಗಿ ಆ ಸಾರವಾದ ಪರಬ್ರಹ್ಮದಲ್ಲಿಯೇ ನಿಲುಗಡೆಯನ್ನು ಪಡೆದಿರುವ ಸದ್ಗುರುವಿಗೆ ಮಾತ್ರ ದೊರೆಯುತ್ತದೆ. ಯಾವನು ಶ್ರುತಿಯ ಅಭಿಪ್ರಾಯವನ್ನೆಲ್ಲ ಬಲ್ಲ ಜ್ಞಾನಿಯೋ, ಯಾವನು ಕರ್ಮದ ಕಾರ್ಯವು ಅನಿತ್ಯವೆಂಬುದನ್ನು ಚೆನ್ನಾಗಿ ಮನಗಂಡು ಕರ್ಮವೆಲ್ಲವನ್ನೂ ತೊರೆದು ನಿತ್ಯವಾದ ಬ್ರಹ್ಮದಲ್ಲಿಯೇ ವಿಶ್ರಾಂತನಾಗಿರುವನೋ, ಅಂಥ ಶಮದಮಾದಿಸಂಪನ್ನನಾದ ಗುರುವಿನ ಬಳಿಗೇ ಹೋಗಿ ತತ್ತ್ವವನ್ನು ತಿಳಿದು ಮನನ ಮಾಡಿ ಅರಿತುಕೊಳ್ಳಬೇಕು. ಅಂಥ ಸದ್ಗುರುವಾದವನು ಮಾಡಿದ ಉಪದೇಶವೇ ಕಾರ್ಯಕಾರಿಯಾಗಿ ಮನಸ್ಸು ತತ್ತ್ವದಲ್ಲಿ ನೆಲೆನಿಂತೀತೇ ಹೊರತು ಮಿಕ್ಕವರು ಯಾರು ಉಪದೇಶಿಸಿದರೂ ತತ್ತ್ವವು ಮನಸ್ಸಿಗೆ ಸಿಕ್ಕುವದಿಲ್ಲ. ಕೆಲವರು ಗುರುಗಳು ಶ್ರೋತ್ರಿಯರಾಗಿರುತ್ತಾರೆ; ಶ್ರುತಿಯನ್ನೂ ಶ್ರುತ್ಯರ್ಥವನ್ನೂ ಬಲ್ಲವರಾಗಿರುತ್ತಾರೆ, ಅವರು ಶಾಸ್ತ್ರವ್ಯಾಖ್ಯಾನಕೌಶಲದಲ್ಲಿ ಎಲ್ಲರನ್ನೂ

ಮರುಳುಮಾಡುವಂಥ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುತ್ತಾರೆ. ಆದರೆ ಅವರು ತತ್ತ್ವದರ್ಶಿಗಳಾಗಿ ಶಮದಮಾದಿಗಳಿಂದೊಡಗೂಡಿ ಬ್ರಹ್ಮನಿಷ್ಠರಾಗಿರುವದಿಲ್ಲ. ಅಂಥ ಕೇವಲ ವಾಗ್ಮಿಗಳ ಉಪದೇಶವು ಶಿಷ್ಯನಲ್ಲಿ ಯಾವ ಪರಿಣಾಮವನ್ನೂ ಉಂಟುಮಾಡ ಲಾರದು. ಆದ್ದರಿಂದ ತತ್ತ್ವಜಿಜ್ಞಾಸುವಾದವನು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿನ ಬಳಿಗೇ ವಿನಯದಿಂದ ಯಾವದಾದರೊಂದು ಯೋಗ್ಯವಾದ ಕಾಣಿಕೆಯನ್ನು ತೆಗೆದುಕೊಂಡು ಹೋಗಿ ಕಂಡು ಸೇವೆಯಿಂದ ಅವನ ಮನಸ್ಸನ್ನು ಒಲಿಸಿಕೊಳ್ಳಬೇಕು. ಇದು ಶಿಷ್ಯನ ಧರ್ಮವು.

ಇಂಥ ಶಿಷ್ಯನಿಗೆ ಗುರುವಾದವನು ಶಾಸ್ತ್ರದಲ್ಲಿ ಹೇಳಿರುವ ಅಕ್ಷರವೆಂಬ ಪರಮಸತ್ಯವಾದ ಬ್ರಹ್ಮವನ್ನು ತಿಳಿಸಿಕೊಡಬೇಕು. ಇದು ಆಚಾರ್ಯನ ಧರ್ಮವು. ಶಿಷ್ಯನಲ್ಲಿರಬೇಕಾದ ಧರ್ಮಗಳನ್ನು ನೋಡಿ ಯೋಗ್ಯನಾಗಿದ್ದರೆ ಅವನನ್ನು ಅವಿದ್ಯಾಸಾಗರದಿಂದ ದಾಟಿಸುವದೇ ಗುರುವಿನ ಕರ್ತವ್ಯವು.

ಶಿಷ್ಯನಲ್ಲಿರುವ ಮುಖ್ಯಗುಣಗಳು ಯಾವವು? ಅವನು ಸದ್ಗುರುವನ್ನು ಶರಣು ಹೊಕ್ಕಿರಬೇಕು, ಮನಸ್ಸಿನಲ್ಲಿ ಶಾಂತಿಯನ್ನು ಹೊಂದಿರಬೇಕು, ಇಂದ್ರಿಯನಿಗ್ರಹವನ್ನು ಪಡೆದುಕೊಂಡಿರಬೇಕು. ಯಾವನಿಗೆ ಇನ್ನೂ ವಿಷಯಭೋಗದ ಆಸೆಯು ಮುಗಿ ದಿಲ್ಲವೋ, ಯಾವನಿಗೆ ಕರ್ಮಾದಿಗಳನ್ನು ಮಾಡಿ ಇಹದಲ್ಲಾಗಲಿ ಪರದಲ್ಲಾಗಲಿ ಸುಖ ವನ್ನು ಗಳಿಸಿಕೊಳ್ಳಬೇಕೆಂಬ ಚಾಪಲ್ಯವು ತಪ್ಪಿಲ್ಲವೋ, ಅಂಥವನು ಪರವಿದ್ಯೆಗೆ ತಕ್ಕವನಲ್ಲ. ಯಾವನು ತಾನೇ ವಿದ್ಯಾವಂತನಾದ್ದರಿಂದ ಶಾಸ್ತ್ರಾರ್ಥವನ್ನೂ ತಾನೇ ತಿಳಿದು ಕೊಂಡು ತತ್ತ್ವವನ್ನು ನಿರ್ಧರಿಸಿಕೊಳ್ಳಬಲ್ಲೆನೆಂಬ ಹೆಮ್ಮೆಯುಳ್ಳವನಾಗಿರವನೋ ಅಂಥವನಿಗೆ ತತ್ತ್ವವನ್ನು ಹೇಳುವದಕ್ಕೆ ಹೋಗುವದು ನಿಷ್ಫಲವಾಗಿರುತ್ತದೆ. ಯಾವನು ವಿರಕ್ತನಾಗಿ ಪ್ರಶಾಂತನಾಗಿ ಶ್ರದ್ಧೆಯಿಂದಲೂ ತತ್ಪರತೆಯಿಂದಲೂ ಇಂದ್ರಿಯಸಂಯಮದಿಂದಲೂ ಕೂಡಿಕೊಂಡು ಶರಣುಬಂದಿರುತ್ತಾನೋ ಅಂಥವನಿಗೆ ಅವಶ್ಯವಾಗಿ ವಿದ್ಯೆಯನ್ನು ಹೇಳಬೇಕು. ಅಂಥವನಿಗೆ ಅವಶ್ಯವಾಗಿ ಅಜ್ಞಾನವು ಹೋಗಿ ಮೋಕ್ಷವು ಲಭಿಸುತ್ತದೆ.

ಅಪರವಿದ್ಯೆಯನ್ನು ಸಂಗ್ರಹವಾಗಿ ವಿವರಿಸಿದ ಬಳಿಕ ಶೌನಕನಿಗೆ ಅಂಗಿರಸನು ಪರವಿದ್ಯೆಯನ್ನು ತಿಳಿಸುವದಕ್ಕೆ ಹೊರಡುವದು ಸಹಜವಾಗಿತ್ತು. ಆದರೆ ಈ ನಡುವೆ ಗುರುಶಿಷ್ಯರ ಧರ್ಮವನ್ನು ಹೇಳಿರುವದೇಕೆಂದರೆ; ಹಿಂದೆ ಹೇಳಿದ ಅಪರವಿದ್ಯೆಯ ಎಲ್ಲೆಕಟ್ಟನ್ನು ತಿಳಿದು ಅದರ ಫಲದಿಂದ ವಿರಕ್ತನಾದವನಿಗೇ ಈ ವಿದ್ಯೆಯಲ್ಲಿ ಅಧಿ ಕಾರವೆಂಬುದನ್ನು ಸ್ಪಷ್ಟಗೊಳಿಸುವದಕ್ಕೆ. ಇದರಿಂದ ಒಂದು ವಿಷಯವು ಸಿದ್ಧವಾಗುತ್ತದೆ. ಅದೇನೆಂದರೆ, ಅಪರವಿದ್ಯೆಯ ಅನುಷ್ಠಾನವೂ ಅದರಿಂದ ಪಡೆಯಬೇಕಾಗಿರುವ ಫಲಸ್ವರೂಪವೂ ಪರವಿದ್ಯೆ ಮತ್ತು ಅದರ ಫಲ—ಇವುಗಳಿಗಿಂತ ತೀರ ಭಿನ್ನವಾಗಿರುತ್ತವೆ.

ಪರವಿದ್ಯೆಯಲ್ಲಿ ಯಾವದಾದರೊಂದು ಸಾಧನವನ್ನು ಮಾಡಿ ಯಾವದಾದರೊಂದು ಫಲವನ್ನು ಪಡೆದುಕೊಳ್ಳತಕ್ಕದ್ದಿರುವದಿಲ್ಲ; ಮತ್ತೇನೆಂದರೆ ಒಳಗೂ ಹೊರಗೂ ಎಲ್ಲವನ್ನೂ ಬಿಟ್ಟುಬಿಟ್ಟು ತನ್ನಲ್ಲಿ ತಾನು ಶಾಂತನಾಗಿರುವ ಶಿಷ್ಯನು ಎಲ್ಲವನ್ನೂ ಬಿಟ್ಟು ಬ್ರಹ್ಮದಲ್ಲಿ ನೆಲೆನಿಂತಿರುವ ಸದ್ಗುರುವಿನಿಂದ ತಿಳಿಯತಕ್ಕದ್ದೇ ಅದು. ಇಲ್ಲಿ ಸಾಧನಫಲಗಳ ಭೇದವಿರುವದಿಲ್ಲ, ಸಾಧನವೂ ಫಲವೂ ಒಂದೇ ಆಗಿರುತ್ತದೆ. ಅಪರವಿದ್ಯೆಯನ್ನು ಅನುಷ್ಠಾನಮಾಡಿದ ಬಳಿಕ ದೇಶಾಂತರದಲ್ಲಿ ಕಾಲಾಂತರದಲ್ಲಿ ಅದರ ಫಲವನ್ನು ಪಡೆದು ಕೊಳ್ಳಬೇಕಾಗಿರುವಂತೆ ಈ ಪರವಿದ್ಯೆಯನ್ನು ಪಡೆದುಕೊಂಡ ಬಳಿಕ ಮಾಡತಕ್ಕದ್ದಾಗಲಿ ಪಡೆಯತಕ್ಕದ್ದಾಗಲಿ ಯಾವದೊಂದೂ ಇರುವದಿಲ್ಲ. ಎಂದೆಂದಿಗೂ ಸಿದ್ಧವಾಗಿರುವ ಬ್ರಹ್ಮಾತ್ಮಸ್ವರೂಪದಲ್ಲಿ ನೆಲೆನಿಲ್ಲುವ ಜ್ಞಾನವೇ ಇಲ್ಲಿ ಪರಮಲಾಭವಾಗಿರುತ್ತದೆ.

ಶೌನಕನು ಪೊಟ್ಟಮೊದಲು ಗುರುವನ್ನು "ಪೂಜ್ಯರೆ, ಯಾವದನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತುಕೊಂಡಂತಾಗುವದು?" ಎಂಬ ಪ್ರಶ್ನೆಯನ್ನು ಹಾಕಿದ್ದನು. ಗುರುವು ಆ ಪರಮಾರ್ಥವನ್ನು ತಿಳಿಸುವದಕ್ಕೆ ಮುಂಚೆ ಸಾಧ್ಯಸಾಧನ ರೂಪವಾಗಿರುವ ವೇದಾರ್ಥವನ್ನೆಲ್ಲ ಅಪರವಿದ್ಯೆ ಎಂಬ ಹೆಸರಿನಿಂದ ಹೊರಚ್ಚುಮಾಡಿ, ಅದಕ್ಕಿಂತ ವಿಲಕ್ಷಣವಾಗಿರುವ ಅದೃಶ್ಯತ್ವಾದಿಧರ್ಮಗಳಿಂದೊಡಗೂಡಿದ ಅಕ್ಷರವನ್ನು ಯಾವ ವಿದ್ಯೆಯಿಂದ ತಿಳಿಯುತ್ತೇವೆಯೋ ಅದೇ ಪರವಿದ್ಯೆಯು, ಅದಕ್ಕಿಂತ ಹೆಚ್ಚಿನ ತಿಳಿವಳಿಕೆಯಿಲ್ಲ, ಅದನ್ನು ತಿಳಿದುಕೊಂಡರೇ ಎಲ್ಲವನ್ನೂ ತಿಳಿದುಕೊಂಡಂತೆ ಆಯಿತು–ಎಂದು ಪ್ರತಿಜ್ಞೆಮಾಡಿ ಅಪರವಿದ್ಯೆಯ ಸ್ವರೂಪವನ್ನು ವಿಸ್ತರಿಸಿದ ಬಳಿಕ ಪರವಿದ್ಯೆಯನ್ನು ಹೇಳುವದಕ್ಕಾಗಿ ಈಗ ಗುರುಶಿಷ್ಯಲಕ್ಷಣವನ್ನು ಹೇಳಿರುತ್ತಾನೆ. ಇದೇ ಸಂದರ್ಭದಲ್ಲಿಯೇ ಅಪರವಿದ್ಯೆಯ ಸಂಬಂಧದಿಂದ ಪೂರ್ಣವಾಗಿ ವಿರಕ್ತನಾಗಿರುವವನೇ ಪರವಿದ್ಯೆಗೆ ಅಧಿಕಾರಿಯೆಂಬುದನ್ನೂ ತಿಳಿಸಿಕೊಟ್ಟಿರುತ್ತಾನೆ. ಈಗ ಅಕ್ಷರವೆಂಬ ಪರಮಾರ್ಥವನ್ನು ತಿಳಿಯಿಸುವ ಪರವಿದ್ಯೆಯು ಪ್ರಾರಂಭವಾಗಿರುತ್ತದೆ.

ಪರವಿದ್ಯೆಯ ವಿಷಯವೇನು? ಅದು ಪರಮಸತ್ಯವಾದ ಅಕ್ಷರವೆಂಬ ಹೆಸರಿನ ತತ್ತ್ವವು. ಆ ಅಕ್ಷರವೆಂಬ ಸತ್ಯಕ್ಕೆ ಕಾಲದಿಂದಾದ, ದೇಶದಿಂದಾದ ಅಥವಾ ಬೇರೊಂದು ವಸ್ತುವಿನಿಂದಾದ ಎಲ್ಲೆಕಟ್ಟು ಇರುವದಿಲ್ಲ. ಆದ್ದರಿಂದ ಅದನ್ನು ಮಾರ್ಪಡಿಸುವ ಅಥವಾ ನಾಶಗೊಳಿಸುವ ಹೇತುವು ಒಳಗಾಗಲಿ ಹೊರಗಾಗಲಿ ಅದರ ಸ್ವರೂಪದಲ್ಲಾಗಲಿ ಇರುವದಿಲ್ಲ. ಈ ಅಕ್ಷರಕ್ಕೆ ಬ್ರಹ್ಮವೆಂಬ ಮತ್ತೊಂದು ಹೆಸರೂ ಉಂಟು. ಬ್ರಹ್ಮವೆಂದರೆ ಎಲ್ಲಕ್ಕೂ ಮಿಗಿಲಾದದ್ದು, ತನಗಿಂತ ಮಿಗಿಲಾದದ್ದಿಲ್ಲದ್ದು. ಇಂಥ ಅಕ್ಷರಸ್ವರೂಪವನ್ನು ತಿಳಿಸುವದೇ ಬ್ರಹ್ಮವಿದ್ಯೆ. ಇದನ್ನು ಸ್ಪಷ್ಟಗೊಳಿಸುವದಕ್ಕಾಗಿ ಅಂಗಿರಸನು ಮೊದಲು ಮಾಡಿರುತ್ತಾನೆ.



## 9. ಅಕ್ಷರವೆಂಬ ಪರಮಾರ್ಥಸತ್ಯ

ತದೇತತ್ ಸತ್ಯಂ ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಙ್ಗಾಃ
ಸಹಸ್ರಶಃ ಪ್ರಭವನ್ತೇ ಸರೂಪಾಃ ।
ತಥಾಕ್ಷರಾದ್ ವಿವಿಧಾಃ ಸೋಮ್ಯ ಭಾವಾಃ
ಪ್ರಜಾಯನ್ತೇ ತತ್ರ ಚೈವಾಪಿ ಯನ್ತಿ ॥1॥

ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯನ್ತರೋ ಹ್ಯಜಃ ।
ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ ॥2॥

*"ಆ ಇದು ಸತ್ಯವು. ಹೇಗೆ ಚೆನ್ನಾಗಿ ಹತ್ತಿಕೊಂಡು ಉರಿವ ಬೆಂಕಿಯಿಂದ ಸಾವಿರಗಟ್ಟಲೆಯಾಗಿ ಅದೇ ರೂಪದ ಕಿಡಿಗಳು ಉಂಟಾಗುವವೋ, ಹಾಗೆಯೇ ಎಲೈ ಸೋಮ್ಯನೆ, ಆ ಅಕ್ಷರದಿಂದ ಬಗೆಬಗೆಯ ಭಾವಗಳು ಹುಟ್ಟುತ್ತವೆ, ಅದರಲ್ಲಿಯೇ ಸೇರಿಕೊಳ್ಳುತ್ತವೆ. ಏಕೆಂದರೆ ಈ ಪುರುಷನು ದಿವ್ಯನು, ಅಮೂರ್ತನು, ಒಳಗೂ ಹೊರಗೂ ಹುಟ್ಟಿಲ್ಲದವನು, ಪ್ರಾಣವಿಲ್ಲದವನು, ಮನಸ್ಸಿಲ್ಲದವನು, ಶುಭ್ರವಾಗಿರುವವನು, ಹೆಚ್ಚಿನ ಅಕ್ಷರಕ್ಕಿಂತಲೂ ಹೆಚ್ಚಿನವನು".*

ಈಗ ಪರವಿದ್ಯೆಯನ್ನು-ಯಾವದೊಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದೋ ಆ ಅಕ್ಷರವೆಂಬ ಪುರುಷನ ತಿಳಿವಳಿಕೆಯನ್ನು-ಉಪದೇಶ ಮಾಡುವದಕ್ಕೆ ಮೊದಲುಮಾಡಿರುತ್ತದೆ. ಈ ಅಕ್ಷರವೆಂಬ ಪುರುಷನು ಸತ್ಯವು, ಪರಮಾರ್ಥವಾಗಿ ಸತ್ಯವು. ಕರ್ಮಫಲಗಳೂ ಉಪಾಸನೆಯ ಫಲಗಳೂ ಸತ್ಯವೇ ಆದರೂ ಅವಕ್ಕೆ ಕಾಲದೇಶಗಳ ಅಪೇಕ್ಷೆಯಿದೆ, ಅವು ನಿತ್ಯವೂ ಅಲ್ಲ. ಆದರೆ ಕಾಲವನ್ನಾಗಲಿ ದೇಶವನ್ನಾಗಲಿ ನಿಮಿತ್ತವನ್ನಾಗಲಿ ಬಯಸದೆ ತಾನೇ ಸತ್ಯವಾಗಿ ಮಿಕ್ಕ ಎಲ್ಲವನ್ನೂ ತನ್ನ ಸತ್ಯತ್ವದಿಂದ ಸತ್ಯವನ್ನಾಗಿ ಮಾಡಬಲ್ಲಸತ್ಯವಿದು. ಇದಕ್ಕೆ ಹೋಲಿಸಿದರೆ ಮಿಕ್ಕದ್ದೆಲ್ಲವೂ ಅಸತ್ಯವೇ, ಅದೊಂದೂ ಇಲ್ಲವೇ ಇಲ್ಲ.

ನಮಗೆ ಕಾಣುವ ಜೀವರುಗಳು ಲೆಕ್ಕವಿಲ್ಲದಷ್ಟು ಇದಾರೆ, ಲೋಕಾಂತರಗಳಲ್ಲಿಯೂ ಜೀವರು ಇದಾರೆಂದು ಶಾಸ್ತ್ರಗಳಿಂದ ತಿಳಿದುಬರುತ್ತದೆ; ಅವರು ಇರಬೇಕೆಂದು ನಮ್ಮ ಊಹೆಗೂ ತಿಳಿಯಬರುತ್ತದೆ. ಲೋಕದಲ್ಲಿ ಮನುಷ್ಯನು ಮಾಡಿರುವ ಚಿತ್ರವಿಚಿತ್ರವಾದ ಕರ್ಮಕ್ಕೆ ತಕ್ಕಂತೆ ಫಲವನ್ನು ಅನುಭವಿಸುವದಕ್ಕೆ ಚಿತ್ರವಿಚಿತ್ರವಾದ ಶರೀರೇಂದ್ರಿಯಗಳನ್ನು ಪಡೆದು ಸುಖದುಃಖವನ್ನು ಬಗೆಬಗೆಯಾಗಿ ಅನುಭವಿಸುತ್ತಿರುವ ಜೀವರುಗಳ ಸಂಖ್ಯೆ ಇಷ್ಟೇ ಎಂದು ಯಾವನು ತಾನೆ ಲೆಕ್ಕಮಾಡಿ ಹೇಳಲಾಪನು? ಆ

ಜೀವರುಗಳಿಗೆ ಸುಖದುಃಖವನ್ನು ಕೊಡುವ ವಿಷಯಗಳೂ ಆ ಸುಖದುಃಖಗಳನ್ನು ಅನುಭವಿಸುವದಕ್ಕೆ ಬೇಕಾಗುವ ಶರೀರ, ಇಂದ್ರಿಯ, ಪ್ರಾಣ, ಮನಸ್ಸು–ಇವುಗಳೂ ಅವರವರಿಗೆ ತಕ್ಕಂತೆ ಇರಬೇಕೆಂದು ಕಲ್ಪಿಸುವದೂ ನ್ಯಾಯವಾಗಿಯೇ ಇದೆ. ನಮ್ಮೆದುರಿಗೆ ಕಾಣುವ ಮನುಷ್ಯ, ಪಶು, ಪಕ್ಷಿ , ಮೃಗ, ಕ್ರಿಮಿ, ಕೀಟಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಈ ಜೀವರುಗಳಿಗೆ ಬೇಕುಬೇಡವೆನಿಸಿರುವ ವಿಷಯಗಳನ್ನು ನೋಡಿರಿ; ಅವುಗಳಲ್ಲಿ ಎಷ್ಟು ಲಕ್ಷಗಟ್ಟಲೆಯ ಒಳರೂಪಗಳು ಕಂಡುಬರುತ್ತವೆ! ಆ ಜೀವರ ಶರೀರೇಂದ್ರಿಯಾದಿಗಳನ್ನು ನೋಡಿರಿ ! ಅಲ್ಲಿಯೂ ಎಂಥ ವಿಚಿತ್ರಕರ ಪ್ರಭೇದಗಳು ಕಂಡುಬರುತ್ತವೆ ! ಹೀಗಿರುವಲ್ಲಿ 'ಅಕ್ಷರವೆಂಬ ಪುರುಷನೊಬ್ಬನೇ ಸತ್ಯನು' ಎಂದು ಹೇಳಬಹುದೆ?–ಎಂಬ ಶಂಕೆಯು ನಮ್ಮಲ್ಲಿ ಸಹಜವಾಗಿ ಮೊಳೆದುಕೊಳ್ಳುತ್ತದೆ.

ಆದರೆ ಈ ಶಂಕೆಯು ಅಕ್ಷರಸ್ವರೂಪವನ್ನು ಅರಿಯದೆ ಇರುವದರಿಂದ ನಮಗೆ ಉಂಟಾಗಿರುತ್ತದೆ. ಏಕೆಂದರೆ ಅಕ್ಷರವೆಂಬ ಪುರುಷನು ಮಿಕ್ಕ ಜೀವರುಗಳಂತೆಯಾಗಲಿ ಜಡಪದಾರ್ಥಗಳಂತೆಯಾಗಲಿ ಕಾಲದೇಶಗಳಿಗೆ ಕಟ್ಟುಬಿದ್ದ ಮೂರ್ತವಸ್ತುವಲ್ಲ, ಆತನು ದಿವ್ಯನಾಗಿರುತ್ತಾನೆ, ಯಾವದೊಂದು ಆಸರೆಯನ್ನೂ ಬಯಸದೆ ತಾನೇ ತನ್ನಲ್ಲಿರುವ ಸ್ವಯಂಜ್ಯೋತಿಸ್ಸ್ವರೂಪನಾಗಿರುತ್ತಾನೆ. ಅವನು ಅಮೂರ್ತನು, ಯಾವ ಆಕಾರವೂ ಇಲ್ಲದವನು, ಆಕಾಶಾದಿಗಳೂ ಅವನನ್ನಾಶ್ರಯಿಸಿಕೊಂಡಿರುವವೇ ಹೊರತು ಅವನು ಏತರ ಆಶ್ರಯದಿಂದಲೂ ಇರತಕ್ಕವನಲ್ಲ. ಅವನು ಎಲ್ಲಿಯೂ ಎಂದಿಗೂ ಹೇಗೂ ಹುಟ್ಟತಕ್ಕವನಲ್ಲ. ಕೆಲವು ವಸ್ತುಗಳು–ಉದಾಹರಣೆಗೆ ಮರಗಳು–ಕೆಲಕೆಲ ಭಾಗಗಳಲ್ಲಿ ಕೆಲಕೆಲ ಕಾಲವಿಶೇಷಗಳಲ್ಲಿ, ಕೆಲಕೆಲ ರೀತಿವಿಶೇಷಗಳಿಂದ ರೂಪಾಂತರವನ್ನು ಪಡೆದು ಹುಟ್ಟುತ್ತಿರುತ್ತವೆ. ಆದರೆ ಈ ಅಕ್ಷರನೆಂಬ ಪುರುಷನು ಒಳಗಾಗಲಿ, ಹೊರಗಾಗಲಿ, ನಡುವೆಯಾಗಲಿ, ಮೇಲಾಗಲಿ, ಕೆಳಗಾಗಲಿ–ಎಲ್ಲಿಯೂ ಮಾರ್ಪಡುವವನಲ್ಲ; ಎಂದಿಗೂ ಮಾರ್ಪಡುವವನಲ್ಲ; ಹೇಗೂ ಒಂದಿಷ್ಟೂ ಮಾರ್ಪಡುವವನೇ ಅಲ್ಲ. ಇಷ್ಟೇ ಅಲ್ಲ, ಅವನಿಗೆ ಶರೀರೇಂದ್ರಿಯಗಳಾಗಲಿ ಪ್ರಾಣವಾಗಲಿ ಮನಸ್ಸಾಗಲಿ ಇರುವದಿಲ್ಲ ; ಹೀಗಿರುವಲ್ಲಿ ಅವನಿಗೆ ಯಾವ ಮೂಲಕವಾಗಿಯಾಗಲಿ ಮಾರ್ಪಾಡಾಗಿ, ಸುಖ ದುಃಖಗಳಾಗಿ, ಅವನ ಏರುಪೇರುಗಳಿಗೆ ಕಾರಣವಾಗುವದಾದರೂ ಹೇಗೆ? ಅವನು ಯಾವನೊಬ್ಬ ಜೀವನಂತೆಯೂ ಇಲ್ಲ, ಯಾವದೊಂದು ಜಡದಂತೆಯೂ ಇಲ್ಲ. ನಾವು ಕಂಡಿರುವ ಕೇಳಿರುವ ಊಹಿಸಬಹುದಾದ ಎಲ್ಲಾ ಬಗೆಯ ಚೇತನಾಚೇತನವಸ್ತುಗಳೂ, ಎಲ್ಲಾ ಲೋಕಗಳೂ, ಎಲ್ಲಾ ಬಗೆಯ ಕರ್ಮಗಳೂ, ಕ್ರಿಯಾಸಾಧನಗಳೂ ಕ್ರಿಯಾಫಲಗಳೂ ಸೇರಿದರೆ ಪ್ರಪಂಚವೆನಿಸಿಕೊಳ್ಳುವದು. ಈ ಪ್ರಪಂಚವು ವಿಧವಿಧವಾಗಿ ಹರಡಿ ಕೊಂಡಿರುವದರಿಂದ ಇದನ್ನು ವ್ಯಾಕೃತವೆಂದು ಕರೆಯುತ್ತಿರುತ್ತೇವೆ. ಈ ಪ್ರಪಂಚವು ಹೀಗೆ

ಕಾಣಿಸಿಕೊಳ್ಳುವ ಮುಂಚೆ ಯಾವ ಸೂಕ್ಷ್ಮರೂಪದಲ್ಲಿರುವದೋ, ಯಾವ ಸೂಕ್ಷ್ಮರೂಪವನ್ನೇ ಇನ್ನುಮೇಲೂ ಪ್ರಲಯಕಾಲಕ್ಕೆ ಇದು ಸೇರಿಕೊಳ್ಳಬೇಕಾಗಿರುವದೋ ಅದು ಅವ್ಯಾಕೃತವೆನಿಸುತ್ತದೆ. ಆ ಅವ್ಯಾಕೃತವು ಒಂದೇ ಸಮನೆ ಪ್ರಪಂಚರೂಪದಲ್ಲಿ ಚಿಗುರಿಕೊಂಡು ಹರಡಿಕೊಳ್ಳುವದು, ಮತ್ತೆ ತನ್ನ ರೂಪಕ್ಕೆ ಮುದುರಿಕೊಂಡು ಸೂಕ್ಷ್ಮವಾದ ಬೀಜರೂಪವನ್ನು ತಳೆಯುತ್ತಿರುವದು. ಹೀಗೆಯೇ ಇದ್ದುಕೊಂಡಿರುವದರಿಂದ ಅದು ಎಂದಿಗೂ ಸವೆಯದ 'ಅಕ್ಷರ' ಎಂಬ ಹೆಸರನ್ನು ಪಡೆದಿರುತ್ತದೆ. ಆದರೆ ನಾವು ಈಗ ಪರವಿದ್ಯೆಗೆ ವಿಷಯವೆಂದು ಹೇಳುತ್ತಿರುವ ಅಕ್ಷರಪುರುಷನು ಆ ಎಲ್ಲಕ್ಕೂ ಹೆಚ್ಚಿನ ಅವ್ಯಾಕೃತವೆಂಬ ಅಕ್ಷರಕ್ಕಿಂತಲೂ ಮಿಗಿಲಾದವನು. ಏಕೆಂದರೆ ಅವ್ಯಾಕೃತಕ್ಕೆ ವ್ಯಾಕೃತರೂಪವಾಗಿ ಮಾರ್ಪಡುವದೆಂಬ ವಿಕಾರವಾದರೂ ಉಂಟು; ಈ ಪುರುಷನಿಗೆ ಅದೂ ಇಲ್ಲ. ಇವನು ತಾನು ಇದ್ದಂತೆಯೇ ಒಂದಿಷ್ಟೂ ಸವೆಯದೆ, ಒಂದಿಷ್ಟೂ ಕಂದದೆ ಕುಂದದೆ ಇದ್ದಂತೆಯೇ ಇರುವದರಿಂದ ಇವನು ಅಕ್ಷರಕ್ಕಿಂತಲೂ ಅಕ್ಷರನು. ಅವ್ಯಾಕೃತವೆಂಬ ಅಕ್ಷರವನ್ನೂ ಅದರ ವಿಕಾರವಾದ ವ್ಯಾಕೃತಪ್ರಪಂಚವೆಲ್ಲವನ್ನೂ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡು ತುಂಬಿಕೊಂಡು ಪೂರ್ಣನಾಗಿರುವದರಿಂದ ಇವನಿಗೆ 'ಪುರುಷನು' ಎಂಬ ಹೆಸರು ಬಂದಿದೆ. ಹೀಗಿರುವದರಿಂದ ಈ ಅಕ್ಷರನ ಸ್ವರೂಪಕ್ಕೆ ಹೋಲಿಸಿದರೆ ಮಿಕ್ಕದ್ದೆಲ್ಲವೂ 'ಅಸತ್ಯ'ವೆನಿಸದೆ ಹೇಗೆ ಇದ್ದೀತು?

ಇನ್ನೊಂದು ಕಾರಣದಿಂದಲೂ ಈ ಪುರುಷನು ಪರಮಸತ್ಯನಾಗಿರುತ್ತಾನೆ. ಅದೇನೆಂದರೆ: ನಾವು ಸತ್ಯವೆಂದು ಬಗೆಯುತ್ತಿರುವ ಜೀವರುಗಳಾಗಲಿ, ಜಡಪದಾರ್ಥಗಳಾಗಲಿ, ಜೀವರುಗಳಿಗೆ ಉಪಾಧಿಯಾಗಿರುವ ಶರೀರೇಂದ್ರಿಯಪ್ರಾಣ ಮನಸ್ಸುಗಳಾಗಲಿ ಯಾವದೊಂದೂ ಈ ಅಕ್ಷರನಿಗಿಂತ ಬೇರೆಯಿಲ್ಲವೇ ಇಲ್ಲ. ನಿಜವಾಗಿ ನೋಡಿದರೆ ಇದೆಲ್ಲವೂ ಈ ಅಕ್ಷರನೆಂಬ ಪುರುಷನೇ. ಅದು ಹೇಗೆಂದರೆ ಮೊಟ್ಟಮೊದಲು ಜೀವರುಗಳನ್ನು ತೆಗೆದುಕೊಳ್ಳೋಣ. ಜೀವರುಗಳ ಸಂಖ್ಯೆಯು ಅಗಣಿತವಾಗಿರುತ್ತದೆ ನಿಜ. ಆದರೆ ಅವರ ಸ್ವರೂಪವೇನು? ಅದರ ಹೊರಗಿನ ಶರೀರೇಂದ್ರಿಯಪ್ರಾಣ ಮನಸ್ಸುಗಳೆಂಬ ಉಪಾಧಿಯ ಮಾತು ಸದ್ಯಕ್ಕೆ ಹಾಗಿರಲಿ; ಅವುಗಳ ವಿಷಯವನ್ನು ಆಮೇಲೆ ವಿಚಾರಿಸೋಣ. ಸದ್ಯಕ್ಕೆ ಈ ಜೀವರುಗಳ ಸ್ವರೂಪವನ್ನು ಮಾತ್ರ ನೋಡೋಣ. ಆ ಸ್ವರೂಪಕ್ಕೂ ಅಕ್ಷರವೆಂಬ ಪುರುಷನ ಸ್ವರೂಪಕ್ಕೂ ಏನು ತಾರತಮ್ಯವಿದೆ? ಅವರಲ್ಲಿ ಜ್ಞಾನವು ಹುಟ್ಟುಹೊಂದುಗಳುಳ್ಳದ್ದಾಗಿ ಸಂಕೋಚವಿಕಾಸಗಳುಳ್ಳದ್ದಾಗಿರುತ್ತದೆ; ಅವರು ಸುಖದುಃಖಗಳುಳ್ಳವರಾಗಿರುತ್ತಾರೆ– ಎಂದು ನಮಗೆ ತಟ್ಟನೆ ತೋರಿಬಿಡುತ್ತದೆ. ಆದರೆ ಸ್ವಲ್ಪ ಸಾವಧಾನವಾಗಿ ವಿಚಾರಮಾಡಿ ನೋಡಿರಿ. ಈ

ಸಂಕೋಚವಿಕಾಸಗಳೂ ಸುಖದುಃಖಗಳೂ ಅವರ ಕೇವಲ ಸ್ವರೂಪಕ್ಕೆ ಸೇರಿದ್ದೋ ಅಥವಾ ಉಪಾಧಿಗಳ ಮೂಲಕ ಅವರಲ್ಲಿ ತೋರುತ್ತಿದೆಯೊ? ಪರೀಕ್ಷೆಮಾಡಿ ನೋಡುವವರಿಗೆ ಈ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಬಹಳಹೊತ್ತು ಹಿಡಿಯುವದಿಲ್ಲ. ಶರೀರೇಂದ್ರಿಯಪ್ರಾಣಮನಸ್ಸುಗಳ ಸಂಬಂಧವಿಲ್ಲದೆ ಯಾರೊಬ್ಬರಿಗೂ ಜ್ಞಾನಸಂಕೋಚ ವಿಕಾಸಗಳಾಗಲಿ ಸುಖದುಃಖಾನುಭವ ವಾಗಲಿ ಆದದ್ದಿಲ್ಲ ; ಯಾವ ಉಪಾಧಿಯೂ ಇಲ್ಲದ ಸುಷುಪ್ತಿಯಲ್ಲಿ ಇವು ಯಾರೊಬ್ಬರಿಗೂ ಆಗುವದಿಲ್ಲ. ಆದ್ದರಿಂದ ಇವು ಉಪಾಧಿಯ ಅಪೇಕ್ಷೆಯಿಂದ ಆಗುತ್ತಿರುತ್ತವೆ. ಆದರೆ ಈಗ ನಾವು ಉಪಾಧಿಗಳನ್ನು ಲೆಕ್ಕಕ್ಕೆ ತೆಗೆದುಕೊಂಡಿಲ್ಲ. ಅವುಗಳನ್ನು ಕೈಬಿಟ್ಟರೆ ಜೀವರ ಸ್ವರೂಪವು ಏನಾಗುತ್ತದೆ? ಅಕ್ಷರನಿಗೆ ಇರುವ, ಏರುಪೇರಿಲ್ಲದ ಸಚ್ಚಿದ್ರೂಪವೇ ಆಗಿಬಿಡುತ್ತದೆ. ಒಂದು ದೊಡ್ಡ ಕೊಳ್ಳಿಯು ಧಗಧಗನೆ ಹತ್ತಿಕೊಂಡು ಉರಿಯುತ್ತಿರುವಾಗ ಅದರಿಂದ ಛಟಛಟನೆ ಸಾವಿರಾರು ಕಿಡಿಗಳು ಹೊರಕ್ಕೆ ಹೊರಟುಬಂದವೆಂದು ತಿಳಿದುಕೊಳ್ಳಿರಿ. ಆಗ ಕಿಡಿಗಳ ಉಪಾಧಿಯಾಗಿರುವ ಇದ್ದಲಿನ ಗಾತ್ರವನ್ನೂ ಆಕಾರವನ್ನೂ ಬಿಟ್ಟರೆ, ಮೂಲವಾದ ಬೆಂಕಿಗೂ ಕಿಡಿಗಳ ಬೆಂಕಿಗೂ ಸ್ವರೂಪದಲ್ಲಿ ಯಾವ ಭೇದವಿದೆ? ಯಾವ ಭೇದವೂ ಇಲ್ಲ. ಬೆಂಕಿಯು ಎಲ್ಲೆಲ್ಲಿಯೂ ಬೆಂಕಿಯೇ. ಅಲ್ಲವೆ? ಇದರಂತೆ ಸಚ್ಚಿದಾನಂದ ಸ್ವರೂಪವಾಗಿರುವ ಈ ಅಕ್ಷರದಿಂದ ಹೊರಕ್ಕೆ ಬಂದು ತೋರಿಕೊಳ್ಳುವ ಅಗಣಿತವಾದ ಜೀವರುಗಳಲ್ಲಿ ತೋರುವ ವೈಚಿತ್ರ್ಯವೆಲ್ಲವೂ ಅವರ ಉಪಾಧಿಗಳಾದ ಶರೀರಾದಿಗಳಿಂದ. ಆ ಉಪಾಧಿಗಳನ್ನು ಲೆಕ್ಕಕ್ಕೆ ಬಿಟ್ಟರೆ, ಅವರ ಸ್ವರೂಪವು ಈ ಅಕ್ಷರವೇ ಆಗಿರುತ್ತದೆ. ಜೀವರುಗಳು ಅಕ್ಷರದಿಂದಲೇ ಬಂದಿರುತ್ತಾರೆ, ಅಕ್ಷರದಲ್ಲಿಯೇ ಇರುತ್ತಾರೆ, ಅಕ್ಷರದಲ್ಲಿಯೇ ಲಯವಾಗುತ್ತಾರೆ. ಅವರುಗಳ ಸ್ವರೂಪವು ಅಕ್ಷರಕ್ಕಿಂತ ಬೇರೆಯಾಗಿ ಇರುವದೇ ಇಲ್ಲ. ಇಷ್ಟೇ ಅಲ್ಲ, ಉಪಾಧಿಗಳು ಬೇರೆ ಬೇರೆಯಾಗಿ ತೋರುವದರಿಂದ ಬೇರೆಬೇರೆಯಾಗಿ ತೋರುವ ಆ ಜೀವರು ಸಂಖ್ಯೆಯಲ್ಲಿ ಅಗಣಿತವೆಂದಾಗಲಿ ಅವರು ಅಕ್ಷರವೆಂಬ ಸತ್ಯನಾದ ಪುರುಷನಿಂದ ನಿಜವಾಗಿಯೂ ಹುಟ್ಟುವರೆಂದಾಗಲಿ ಹೇಳುವದೂ ತಪ್ಪೇ ಆಗುತ್ತದೆ. ಆಕಾಶದಲ್ಲಿ ನೂರಾರು ಗಡಿಗೆಗಳು ಹುಟ್ಟಿದರೆ ನೂರಾರು ಘಟಾಕಾಶಗಳು ಹುಟ್ಟಿದವೆಂದು ತಿಳಿಯುವಂತೆಯೇ ಜೀವರು ಅಕ್ಷರದಿಂದ ಹುಟ್ಟುವರೆಂದು ತಿಳಿಯುವದೂ ತಪ್ಪು ತಿಳಿವಳಿಕೆಯಾಗಿರುತ್ತದೆ.

ಹಾಗಾದರೆ ಉಪಾಧಿಗಳ ಗತಿಯೇನು? ಅವುಗಳಾದರೂ ಬೇರೆ ಇವೆಯೊ, ಇಲ್ಲವೊ? ಉಪಾಧಿಗಳಿಂದ ಜೀವರಲ್ಲಿ ನಿಜವಾದ ವೈಚಿತ್ರ್ಯವಾದರೂ ಆಗಿದೆಯೊ, ಇಲ್ಲವೊ?—ಇದನ್ನು ಇನ್ನು ವಿಚಾರಮಾಡಬೇಕಾಗಿರುತ್ತದೆ.



## 10. ಅಕ್ಷರದಿಂದಲೇ ಅನಾತ್ಮವೆಲ್ಲವೂ ಹುಟ್ಟುತ್ತವೆ

**ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ ।**
**ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥3॥**

*"ಈತನಿಂದಲೇ ಪ್ರಾಣವೂ ಮನಸ್ಸೂ ಎಲ್ಲಾ ಇಂದ್ರಿಯಗಳೂ ಆಕಾಶವೂ ವಾಯುವೂ ತೇಜಸ್ಸೂ, ಅಪ್ಪೂ, ಎಲ್ಲವನ್ನೂ ಧರಿಸಿರುವ ಪೃಥ್ವಿಯೂ ಉಂಟಾಗುತ್ತವೆ."*

ಅಕ್ಷರವೆಂಬ ಪುರುಷನು ಪರಮಾರ್ಥಸತ್ಯಸ್ವರೂಪನಾದವನು. ಅವನಲ್ಲಿ ಪ್ರಾಣವಾಗಲಿ ಮನಸ್ಸಾಗಲಿ ಇಲ್ಲವೇ ಇಲ್ಲ; ಆತನಿಂದಲೇ ಬಗೆಬಗೆಯ ಜೀವರುಗಳು ಹುಟ್ಟುತ್ತಾರೆ–ಎಂದು ಹೇಳಿದ್ದಾಯಿತು. ಹೀಗೆ ಹೇಳಿದ್ದರಿಂದ ಜೀವರುಗಳೂ ಅವರ ಉಪಾಧಿಯಾಗಿರುವ ಪ್ರಾಣಮನಸ್ಸುಗಳೂ ಸ್ವತಂತ್ರವಾಗಿ ಇರುವವರಲ್ಲವೆಂದೂ ಅವರ ಇರವು ಪರಮಪುರುಷನಾದ ಆ ಪರಮಾತ್ಮನ ಅಧೀನವೆಂದೂ ಹೇಳಿದಂತೆಯೇ ಆಯಿತು. ಆದರೂ ಶರೀರೇಂದ್ರಿಯಪ್ರಾಣಮನಸ್ಸುಗಳೆಂಬ ಉಪಾಧಿಗಳ ಸಂಬಂಧ ದಿಂದಲೇ ಜೀವರುಗಳಿಗೆ ಉತ್ಪತ್ತಿನಾಶಗಳು ಆಗುವಂತೆ ತೋರುತ್ತವೆ–ಎಂದು ಹೇಳಿದ್ದರಿಂದ ಉಪಾಧಿಗಳಾದರೂ ಸ್ವತಂತ್ರವಾಗಿ ಸತ್ಯವಾಗಿ ಇರುವವೊ, ಏನೊ–ಎಂದು ಯಾರಾದರೂ ಬಗೆದಾರು ; ಆದ್ದರಿಂದ ಆ ಅಭಿಪ್ರಾಯವನ್ನು ತಳ್ಳಿಹಾಕುವದಕ್ಕಾಗಿ ಈ ಮಂತ್ರವು ಬಂದಿರುತ್ತದೆ.

ಪರಮಾರ್ಥಸತ್ಯರೂಪನಾದ ಅಕ್ಷರನೆಂಬ ಪುರುಷನೋರ್ವನೇ ಮೊದಲು ಇರುವವನು. ಉರಿಯುವ ಬೆಂಕಿಯಿಂದ ಕಿಡಿಗಳು ಹುಟ್ಟುವಹಾಗೆ ಆತನಿಂದಲೇ ಜೀವರುಗಳು ಹುಟ್ಟುತ್ತಾರೆ. ಈ ಜೀವರುಗಳು ಪರಮಾತ್ಮನಿಂದ ಬಂದಿರುವದರಿಂದ ಆತನಿಗೆ ಸಮಾನವಾದ ಸಚ್ಚಿದಾನಂದಸ್ವರೂಪರೇ ಆಗಿರುತ್ತಾರೆ. ನಿಜವಾಗಿ ಸ್ವರೂಪದಿಂದ ಅವರಿಗೆ ಹುಟ್ಟುಹೊಂದುಗಳೇನೂ ಇರುವದಿಲ್ಲ ; ಏಕೆಂದರೆ ಸಚ್ಚಿದಾನಂದಸ್ವರೂಪಕ್ಕೆ ಎಂದಿಗೂ ವಿಕಾರವುಂಟಾಗಲಾರದು; ಅದರ ಸಂಕೋಚವಿಕಾಸಗಳೆಂಬಿವು ಉಪಾಧಿಗಳಿಂದ ಉಂಟಾಗುವ ಹಾಗೆ ತೋರುವದೇ ಹೊರತು ನಿಜವಾಗಿ ಸ್ವರೂಪಕ್ಕೆ ಹತ್ತಿಕೊಂಡಿರುವದಿಲ್ಲ.

ಈ ಉಪಾಧಿಗಳಾದ ಪ್ರಾಣ, ಮನಸ್ಸು, ಇಂದ್ರಿಯ, ಶರೀರ–ಎಂಬಿವೂ ಪರಮಸತ್ಯಸ್ವರೂಪನಾದ ಅಕ್ಷರನೆಂಬ ಪುರುಷನಿಂದಲೇ ಬಂದಿರುತ್ತವೆ. ಅವು ಹುಟ್ಟುವದಾದರೂ ಪರಮಾರ್ಥವಲ್ಲ. ಏಕೆಂದರೆ ಒಬ್ಬನೇ ಒಬ್ಬನಾಗಿ, ಅದ್ವಿತೀಯನಾಗಿ,

ಅವಿಕಾರಿಯಾಗಿರುವ ಅಕ್ಷರನೆಂಬ ಪುರುಷನಿಂದ ಬಗೆಬಗೆಯಾಗಿ ಸದ್ವಿತೀಯವಾಗಿ ವಿಕಾರಿಗಳಾಗಿರುವ ಪ್ರಾಣಾದಿಗಳು ಪರಮಾರ್ಥವಾಗಿ ಹುಟ್ಟುವದಾದರೂ ಹೇಗೆ? ಹಾಗೆ ನಿಜವಾಗಿಯೇ ಅವು ಹುಟ್ಟುವದಾದರೆ ಅಕ್ಷರನೆಂಬ ಪುರುಷನೇ ಆ ರೂಪವಾಗಿ ಪರಿಣಮಿಸುತ್ತಾನೆಂದು ಹೇಳಿದಂತೆ ಆಗುವದಿಲ್ಲವೆ? ಆಗ "ಅಕ್ಷರ"ನು, ಎಂದರೆ ನಾಶವಿಲ್ಲದವನು ಎಂಬ ಹೆಸರೇ ಆ ಪುರುಷನಿಗೆ ಹೊಂದದೆಹೋಗುವದಿಲ್ಲವೆ? ವಿಕಾರಿಯಾಗಿರುವವನು ಅಕ್ಷರನಾಗಿರುವದು ಹೇಗೆ? ಆದ್ದರಿಂದ ಪ್ರಾಣ, ಮನಸ್ಸು, ಇಂದ್ರಿಯಗಳು–ಇವೆಲ್ಲವೂ ಆತ್ಮನಲ್ಲಿ ತೋರಿಕೊಳ್ಳುವದು ಹೇಗೆ–ಎಂದರೆ ಅಪುತ್ರವಂತನಾದ ಒಬ್ಬ ಮನುಷ್ಯನಿಗೆ ಕನಸಿನಲ್ಲಿ ಪುತ್ರರು ಹುಟ್ಟಿದಂತೆ ತೋರುವದಿಲ್ಲವೆ? ಹಾಗೆಯೇ ಅಪ್ರಾಣನೂ ಅಮನಸ್ಕನೂ ಅನಿಂದ್ರಿಯನೂ ಅಶರೀರನೂ ಆಗಿರುವ ಪರಮಪುರುಷನಿಗೆ ಪ್ರಾಣ, ಮನಸ್ಸು, ಇಂದ್ರಿಯಗಳು, ಶರೀರಗಳು–ಎಲ್ಲವೂ ಉಂಟಾದಂತೆ ತೋರಿಕೊಳ್ಳುವವು. ಒಬ್ಬನೇ ಒಬ್ಬನಾಗಿದ್ದುಕೊಂಡಿರುವ ಆ ಪುರಮಪುರುಷನು ಈ ಉಪಾಧಿಗಳಿಂದ ಅಜ್ಞಾನಿಗಳಿಗೆ ಅನೇಕರಾಗಿ ತಾರತಮ್ಯದಿಂದ ಬೇರೆಬೇರೆ ಯೋಗ್ಯತೆಯುಳ್ಳ ಜೀವರ ಸ್ವರೂಪನಾಗಿ ಕಾಣಿಸಿಕೊಳ್ಳುತ್ತಾನೆ. ಹೇಗೆ ಅಪುತ್ರವಂತನಾದ ಒಬ್ಬನಿಗೆ ಕನಸಿನಲ್ಲಿ ಒಂಬತ್ತು ಜನ ಮಕ್ಕಳಾದಂತೆ ತೋರಿದರೂ ನಿಜವಾಗಿ ಅವನಿಗೆ ಒಬ್ಬರೂ ಮಕ್ಕಳೇ ಇಲ್ಲವೆಂಬುದು ಪರಮಾರ್ಥವೋ ಹಾಗೆಯೇ ಅವಿದ್ಯೆಯಿಂದ ಪ್ರಾಣ, ಮನಸ್ಸು, ಇಂದ್ರಿಯಗಳು–ಎಂಬ ಉಪಾಧಿಗಳು ಉಂಟಾಗಲು ತೋರುವ ವೈವಿಧ್ಯದಿಂದ ಆತ್ಮನಲ್ಲಿ ನಿಜವಾಗಿ ಯಾವದೊಂದು ಭೇದವಾಗಲಿ ವಿಕಾರವಾಗಲಿ ಉಂಟಾಗುವದೇ ಇಲ್ಲ, ಅವನು ಆ ಉಪಾಧಿಗಳ ಹುಟ್ಟಿಗೆ ಮುಂಚೆಯೂ ಅವುಗಳು ಹುಟ್ಟಿದಮೇಲೆಯೂ ಅವುಗಳು ಲಯವಾದ ಬಳಿಕವೂ ತಾನೊಬ್ಬನೇ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿ ಇದ್ದುಕೊಂಡಿರುತ್ತಾನೆ.

ಇಲ್ಲಿ ಕೆಲವರಿಗೆ ಹೀಗೆ ಶಂಕೆಯುಂಟಾಗಬಹುದು; ಈ ಶರೀರವೂ ಇಂದ್ರಿಯಗಳೂ ಮನಸ್ಸೂ ಪಂಚಭೂತಗಳಿಂದ ಉಂಟಾಗಿರುವವು. ಪಂಚಭೂತಗಳು ಅನಾದಿಯಾಗಿದ್ದುಕೊಂಡು ಬಗೆಬಗೆಯ ವಿಕಾರಗಳನ್ನು ಹೊಂದುತ್ತಾ ಶರೀರೇಂದ್ರಿಯಾದಿಗಳ ರೂಪವಾಗಿ ಆಗುತ್ತಿರುವವು. ಇವುಗಳನ್ನು ಹೇಗೆ ಹೇಗೆ ಮಾರ್ಪಡಿಸಿದರೂ ಇವು ತೀರ ನಾಶವಾಗುವದು ಎಂದಿಗೂ ಸಂಭವವಿಲ್ಲ, ಏಕೆಂದರೆ ಇರುವ ವಸ್ತುವು ಎಂದಿಗೂ ನಾಶವಾಗಲಾರದು; ಇಲ್ಲದ ವಸ್ತು ಎಂದಿಗೂ ಉಂಟಾಗಲಾರದು. ಆದ್ದರಿಂದ ಪಂಚಭೂತಗಳು ಮಾರ್ಪಡುತ್ತಿರುವದರಿಂದ ಇವುಗಳನ್ನು ಪರಿಣಾಮಿಗಳೆಂದು ಬೇಕಾದರೆ ಕರೆಯಿರಿ; ಆದರೆ ಇವು ಎಂದಿಗೂ ಅನಿತ್ಯವಲ್ಲ, ಹೀಗಿರುವಲ್ಲಿ ಇವು ಅಸತ್ಯವೆಂದು ಹೇಳಬಹುದೆ? ಸತ್ಯರೂಪನಾದ

ಪರಮೇಶ್ವರನು ಸೃಷ್ಟಿಮಾಡುವ ಜಗತ್ತು ಸತ್ಯವಾಗಿರಬೇಕೇ ಹೊರತು ಅಸತ್ಯವಾಗಿರುವ ಕಾರಣವಿಲ್ಲ. ಆದ್ದರಿಂದಲೂ ಇವುಗಳನ್ನು ಕನಸಿನ ತೋರಿಕೆಗಳಿಗೆ ಹೋಲಿಸುವದು ಯುಕ್ತವಾಗುವದಿಲ್ಲವಲ್ಲ!

ಈ ಶಂಕೆಗೆ ಪರಿಹಾರವೇನೆಂದರೆ, ಈ ಉಪನಿಷತ್ತಿನಲ್ಲಿ ಪ್ರಕೃತವಾಗಿರುವ ವಿಷಯವನ್ನು ನೋಡಿ ಸೃಷ್ಟಿವಾಕ್ಯಗಳಿಗೆ ತಾತ್ಪರ್ಯವನ್ನು ಕಲ್ಪಿಸುವದು ಯುಕ್ತವಾಗಿರುತ್ತದೆ. ಇಲ್ಲಿ ಜಗತ್ತು ಪುರುಷನಿಂದ ಉಂಟಾಗಿದೆಯೆ, ಅಥವಾ ಮತ್ತೇತರಿಂದಲಾದರೂ ಉಂಟಾಗಿದೆಯೆ? ಇಲ್ಲದಿದ್ದರೆ ಯಾವಾಗಲೂ ತಾನು ಇದ್ದಂತೆಯೇ ಇದ್ದು ಕೊಂಡಿರುತ್ತದೆಯೆ?–ಎಂಬ ವಿಚಾರವೇನೂ ಪ್ರಕೃತವಾಗಿಲ್ಲ. ''ಯಾವದೊಂದನ್ನು ತಿಳಿದುಕೊಂಡರೆ ಇದೆಲ್ಲವನ್ನೂ ತಿಳಿದುಕೊಂಡಂತೆ ಆಗುತ್ತದೆ?'' ಎಂಬ (1–1–3) ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಹೊರಟಿರುವ ಅಂಗಿರಸನು ಅಕ್ಷರವೊಂದೇ ಪರಮಸತ್ಯವು, ಅದನ್ನೊಂದನ್ನೇ ಅರಿತುಕೊಂಡರೂ ಎಲ್ಲವನ್ನೂ ಅರಿತುಕೊಂಡಂತೆ ಆಗುವದು–ಎಂದು ಹೇಳುವದಕ್ಕಾಗಿ ಈ ಪ್ರಕರಣದಲ್ಲಿ ಸೃಷ್ಟಿಯನ್ನು ಹೇಳುವದಕ್ಕೆ ಹೊರಟಿರುತ್ತಾನೆ. ಆದ್ದರಿಂದ ಮನಸ್ಸು, ಪ್ರಾಣ, ಇಂದ್ರಿಯಗಳು, ಶರೀರ–ಇವೆಲ್ಲವೂ ಅಕ್ಷರನೆಂಬ ಪರಮಸತ್ಯದಿಂದಲೇ ಉಂಟಾಗಿರುತ್ತವೆಯಾದ್ದರಿಂದ ಆ ಅಕ್ಷರನೆಂಬ ಪುರುಷನ ಸ್ವರೂಪವನ್ನು ಅರಿತುಕೊಂಡರೆ ಈ ಎಲ್ಲವನ್ನೂ ಅರಿತಂತೆಯೇ ಆಗುತ್ತದೆ ಎಂದು ಹೇಳುವದಕ್ಕಾಗಿ ಪ್ರಾಣಾದಿಗಳ ಸೃಷ್ಟಿಯನ್ನು ಹೇಳಿದೆಯೇ ಹೊರತು ಇವುಗಳು ನಿಜವಾಗಿ ಸೃಷ್ಟಿಯಾಗಿವೆ ಎಂಬುದು ಶ್ರುತಿಯ ತಾತ್ಪರ್ಯವಲ್ಲವೆಂದಾಯಿತು.

ಶರೀರಾದಿಗಳೆಲ್ಲವೂ ಪಂಚಭೂತಗಳಿಂದ ಆಗಿರುವವೆಂಬುದು ನಿಜವೇ. ಆ ಪಂಚಭೂತಗಳೆಲ್ಲ ಯಾವಾಗಲೂ ಸತ್ಯವಾಗಿಯೇ ನಮಗೆ ತೋರುವವೆಂಬುದೂ ನಿಜವೇ. ಪರಮಸತ್ಯನಾಗಿರುವ ಪುರುಷನಿಂದ ಬಂದಿರುವ ಪಂಚಭೂತಗಳಾಗಲಿ ಅವುಗಳಿಂದಾಗಿರುವ ಶರೀರಪ್ರಾಣಮನಸ್ಸುಗಳಾಗಲಿ ಸತ್ಯವಾಗಿ ತೋರದೆ ಮತ್ತೆ ಹೇಗೆ ತೋರಿಯಾವು? ಅವು ಸತ್ಯದಿಂದಲೇ ಬಂದಿರುತ್ತವೆ, ಸತ್ಯದಲ್ಲಿಯೇ ಇರುತ್ತವೆ, ಸತ್ಯದಲ್ಲಿಯೇ ಕೊನೆಗಾಣುತ್ತವೆ. ಆದ್ದರಿಂದ ಅವುಗಳ ತಿರುಳು ಸತ್ಯವೇ ಆಗಿರುತ್ತದೆ. ಈ ವಿಷಯಕ್ಕೆ ಯಾವ ಸಂಶಯವೂ ಇಲ್ಲ. ಆದರೆ ಅವು ತಾವು ತೋರುವ ರೂಪದಿಂದ ಸತ್ಯವಲ್ಲ ; ಅವುಗಳ ಇರವು ಸತ್ಯವಾದರೂ ಅವು ತಾವು ತೋರುವ ರೂಪದಿಂದ ಯಾವಾಗಲೂ ಒಂದೇ ರೀತಿಯಲ್ಲಿರುವದೇ ಇಲ್ಲ. ಯಾವದು ತನ್ನ ಸ್ವರೂಪವನ್ನು ಇದ್ದಂತೆ ಇಟ್ಟುಕೊಳ್ಳಲರಿಯದೋ ಅದು ಪರಮಾರ್ಥವಾಗಿ ಹೇಗೆ ಸತ್ಯವಾದೀತು? ತೋರಿದ್ದೆಲ್ಲ ಸತ್ಯವಾಗುವದಾದರೆ ಕನಸಿನ ವಸ್ತುಗಳೂ ಎಚ್ಚರದ ವಸ್ತುಗಳಷ್ಟೇ ಸತ್ಯವಾಗಬೇಕಾದೀತು; ಹಗ್ಗದ ಹಾವೂ ನಿಜವಾದ ಹಾವಿನಷ್ಟೇ ಸತ್ಯವಾಗಬೇಕಾದೀತು. ಆದರೆ ಕನಸಿನ

ತೋರಿಕೆಗಳಿಗೂ ಭ್ರಾಂತಿಯ ತೋರಿಕೆಗಳಿಗೂ ನಿಜವಾದ ವಸ್ತುಗಳ ಬೆಲೆಯನ್ನು ವ್ಯವಹಾರದಲ್ಲಿ ಯಾರೂ ಕೊಡುತ್ತಲಿಲ್ಲ. ಇದರಂತೆ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ–ಇವು ಆತ್ಮನಿಂದ ಹುಟ್ಟಿದ್ದರೂ ತಾವು ತೋರುವ ರೂಪದಿಂದ ಇದ್ದಂತಿರದೆ ಕ್ಷಣಕ್ಕೊಂದು ರೂಪವನ್ನು ತಾಳುತ್ತಾ ಬಗೆಬಗೆಯ ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರ–ಇವುಗಳ ರೂಪವನ್ನು ತಳೆಯುತ್ತಾ ಜೀವರುಗಳಲ್ಲಿ ದೇವತೆಗಳು, ತಿರ್ಯಗ್ಜಂತುಗಳು, ಮನುಷ್ಯರು, ಸ್ಥಾವರಪ್ರಾಣಿಗಳು–ಎಂದು ಮುಂತಾಗಿ ಭೇದವನ್ನು ತೋರ್ಪಡಿಸುತ್ತಿರುವವು. ಆದ್ದರಿಂದ ಈ ಪೃಥ್ವ್ಯಾದಿಗಳು ತಾವು ತೋರುವ ರೂಪದಲ್ಲಿ ಎಂದಿಗೂ ಪರಮಾರ್ಥಸತ್ಯವಾಗಲಾರವು.

ಆದರೂ ಇವುಗಳೆಲ್ಲವೂ ನಮಗೆ ಸತ್ಯವೆಂದೇ ತೋರಿಕೊಳ್ಳುತ್ತಿರುವವು. ಜೀವರು, ಅವರ ಉಪಾಧಿಗಳಾದ ಶರೀರಪ್ರಾಣಮನಇಂದ್ರಿಯಗಳು, ಅವರು ಮಾಡುತ್ತಿರುವ ಕರ್ಮಗಳು, ಆ ಕರ್ಮಗಳಿಗೆ ಬೇಕಾದ ಸಾಮಗ್ರಿಗಳು, ಆ ಕರ್ಮಗಳಿಂದ ದೊರಕುವ ಲೋಕಗಳು, ಭೋಗಗಳು–ಎಲ್ಲವೂ ಸತ್ಯವೆಂದೇ ತೋರುವವೇ ಹೊರತು ಅಸತ್ಯವೆಂದೇನೂ ತೋರುವದಿಲ್ಲ. ಇಷ್ಟೇಕೆ? ಭ್ರಾಂತಿಯ ಕಾಲಕ್ಕೆ ತೋರುವ ವಸ್ತುಗಳೂ ನಮಗೆ ಆಗ್ಗೆ ಸತ್ಯವೆಂದೇ ತೋರಿಕೊಳ್ಳುತ್ತಿರುತ್ತವೆ. ಇದಕ್ಕೆ ಕಾರಣವೇನೆಂದರೆ ಪರಮಾರ್ಥಸತ್ಯವಾದ ಅಕ್ಷರನೆಂಬ ಪುರುಷನೇ ಅವುಗಳ ತಿರುಳಾಗಿರುತ್ತಾನೆ. ಯಾವ ತೋರಿಕೆಯಾಗಲಿ ಅಕ್ಷರನೆಂಬ ಪರಮಾರ್ಥಸತ್ಯವನ್ನು ಬಿಟ್ಟು ತಾನೇ ಸ್ವತಂತ್ರವಾಗಿ ತೋರಿಕೊಳ್ಳಲಾರದು; ಅದರ ಹುಟ್ಟು, ಇರವು, ನಾಶ–ಎಲ್ಲವೂ ಆ ಪರಮಾರ್ಥ ಸತ್ಯವನ್ನೇ ಅವಲಂಬಿಸಿಕೊಂಡಿರುತ್ತವೆ. ಆದ್ದರಿಂದ ಜೀವರುಗಳೂ ಅವರ ಉಪಾಧಿಗಳಾದ ಪ್ರಾಣಾದಿಗಳೂ ಅವರ ಕ್ರಿಯೆಗಳೂ ಅವುಗಳ ಕಾರಕಗಳೂ ಫಲಗಳೂ ಎಲ್ಲವೂ ಅಕ್ಷರವೆಂಬ ಪುರುಷನ ರೂಪದಿಂದ ಸತ್ಯವೇ ಆಗಿರುತ್ತವೆ. ಈ ಸತ್ಯವನ್ನು ಅರಿತುಕೊಂಡರೆ ಈ ಜಗತ್ತಿನ ತತ್ತ್ವವನ್ನೆಲ್ಲವನ್ನೂ ಅರಿತುಕೊಂಡಂತೆ ಆಗುವದು. ಈ ದೃಷ್ಟಿಯಿಂದ ನೋಡಿದರೆ ಯಾವದೊಂದೂ ಮಿಥ್ಯೆಯಲ್ಲ, ಎಲ್ಲವೂ ಪರಮಾರ್ಥಸತ್ಯವೇ ಆಗಿರುತ್ತದೆ.

ಆದರೆ ಪ್ರಾಣ, ಮನಸ್ಸು–ಮುಂತಾದವುಗಳು ತಮ್ಮ ತಮ್ಮ ರೂಪದಿಂದ ಎಂದಿಗೂ ಸತ್ಯವಲ್ಲ, ಏಕೆಂದರೆ ಆ ರೂಪದಿಂದ ಅವು ಪರಮಾರ್ಥವಾದ ಅಕ್ಷರವೆಂಬ ಪುರುಷನಲ್ಲಿ ಹುಟ್ಟುಗಟ್ಟಿದವಾಗಿರುತ್ತವೆ. ಹೀಗೆ ಪ್ರಾಣಾದಿಗಳು ತಮ್ಮ ತೋರಿಕೆಯ ರೂಪದಿಂದ ಮಿಥ್ಯೆಯಾಗಿರುವದರಿಂದಲೂ ನಿಜವಾದ ರೂಪದಿಂದ ಅಕ್ಷರವೇ ಆಗಿರುವದರಿಂದಲೂ ಅಕ್ಷರನೆಂಬ ಪುರುಷನು ತನಗೆರಡನೆಯದಿಲ್ಲದ ಪರಮಾರ್ಥಸತ್ಯವೆಂಬುದೇ ಕೊನೆಯ ಸಿದ್ಧಾಂತವಾಗಿರುತ್ತದೆ.



# 11. ಅಕ್ಷರವೇ ಎಲ್ಲದರ ತಿರುಳೆಂಬುದನ್ನು ನಮ್ಮ ನಮ್ಮ ಹೃದಯದಲ್ಲಿ ಕಂಡುಕೊಳ್ಳಬೇಕು

ಅಗ್ನಿರ್ಮೂರ್ಧಾ ಚಕ್ಷುಷೀ ಚನ್ದ್ರಸೂರ್ಯೌ
ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ।
ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ
ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾನ್ತರಾತ್ಮಾ ॥4॥

ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ
ಸೋಮಾತ್ ಪರ್ಜನ್ಯ ಓಷಧಯಃ ಪೃಥಿವ್ಯಾಮ್।
ಪುಮಾನ್ ರೇತಃ ಸಿಞ್ಚತಿ ಯೋಷಿತಾಯಾಂ
ಬಹ್ವೀಃ ಪ್ರಜಾಃ ಪುರುಷಾತ್ ಸಂಪ್ರಸೂತಾಃ ॥5॥

ತಸ್ಮಾದೃಚಃ ಸಾಮ ಯಜೂಗ್ಂಷಿ ದೀಕ್ಷಾ
ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ।
ಸಂವತ್ಸರಶ್ಚ ಯಜಮಾನಶ್ಚ ಲೋಕಾಃ
ಸೋಮೋ ಯತ್ರ ಪವತೇ ಯತ್ರ ಸೂರ್ಯಃ ॥6॥

ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ
ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ
ಪ್ರಾಣಾಪಾನೌ ವ್ರೀಹಿಯವೌ ತಪಶ್ಚ
ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥7॥

ಸಪ್ತ ಪ್ರಾಣಾಃ ಪ್ರಭವನ್ತಿ ತಸ್ಮಾತ್
ಸಪ್ತಾರ್ಚಿಷಃ ಸಮಿಧಃ ಸಪ್ತ ಹೋಮಾಃ।
ಸಪ್ತ ಇಮೇ ಲೋಕಾ ಯೇಷು ಚರನ್ತಿ ಪ್ರಾಣಾ
ಗುಹಾಶಯಾ ನಿಹಿತಾಃ ಸಪ್ತ ಸಪ್ತ ॥8॥

ಅತಃ ಸಮುದ್ರಾ ಗಿರಯಶ್ಚ ಸರ್ವೇ
ಅಸ್ಮಾತ್ ಸ್ಯನ್ದನ್ತೇ ಸಿನ್ಧವಃ ಸರ್ವರೂಪಾಃ।

ಅತಶ್ಚ ಸರ್ವಾ ಓಷಧಯೋ ರಸಶ್ಚ
ಯೇನೈಷ ಭೂತೈಸ್ತಿಷ್ಠತೇ ಹ್ಯನ್ತರಾತ್ಮಾ ॥9॥

ಪುರುಷ ಏವೇದಂ ವಿಶ್ವಂ ಕರ್ಮ
ತಪೋ ಬ್ರಹ್ಮ ಪರಾಮೃತಮ್ ।
ಏತದ್ ಯೋ ವೇದ ನಿಹಿತಂ ಗುಹಾಯಾಂ
ಸೋಽವಿದ್ಯಾಗ್ರನ್ಥಿಂ ವಿಕಿರತೀಹ ಸೋಮ್ಯ ॥10॥

*"ಅಗ್ನಿಯೇ ತಲೆ, ಚಂದ್ರಸೂರ್ಯರೇ ಕಣ್ಣುಗಳು, ದಿಕ್ಕುಗಳೇ ಕಿವಿಗಳು, ಹೊರಬಂದಿರುವ ವೇದಗಳೇ ಮಾತು, ವಾಯುವೇ ಪ್ರಾಣವು, ವಿಶ್ವವೇ ಹೃದಯವು, ಪೃಥಿವಿಯೇ ಪಾದಗಳು–ಹೀಗಿರುವ ಸರ್ವಭೂತಾಂತರಾತ್ಮನೂ ಆತನಿಂದಲೇ ಹುಟ್ಟುತ್ತಾನೆ. ಯಾವ ಅಗ್ನಿಗೆ ಸೂರ್ಯನೇ ಸಮಿತ್ತೋ ಅವನು, ಸೋಮನಿಂದಾಗುವ ಪರ್ಜನ್ಯ, ಪೃಥಿವಿಯಲ್ಲಾಗುವ ಸಸ್ಯಗಳು, ಪುರುಷನು ಸ್ತ್ರೀಯಲ್ಲಿ ರೇತಸ್ಸನ್ನು ಚಿಮುಕಿಸುವದು–ಹೀಗೆ ಪುರುಷನಿಂದ ಅನೇಕ ಪ್ರಜೆಗಳು ಉಂಟಾಗುತ್ತಿರುತ್ತಾರೆ. ಆತನಿಂದಲೇ ಋಕ್ಕುಗಳು, ಯಜುಸ್ಸುಗಳೂ, ದೀಕ್ಷೆಗಳು, ಯಜ್ಞಗಳು, ಎಲ್ಲಾ ಕ್ರತುಗಳು, ದಕ್ಷಿಣೆಗಳು, ಸಂವತ್ಸರ, ಯಜಮಾನ, ಎಲ್ಲಿ ಸೋಮನು ಪವಿತ್ರಗೊಳಿಸುತ್ತಿರುವನೋ ಮತ್ತು ಎಲ್ಲಿ ಸೂರ್ಯನು ಪವಿತ್ರ ಗೊಳಿಸುತ್ತಿರುವನೋ ಆ ಲೋಕಗಳು–ಎಲ್ಲವೂ ಉಂಟಾಗುತ್ತವೆ. ಮತ್ತು ಆತನಿಂದಲೇ ದೇವತೆಗಳು ಬಗೆಬಗೆಯಾಗಿ ಹುಟ್ಟುವರು; ಸಾಧ್ಯರು, ಮನುಷ್ಯರು, ಪಶುಗಳು, ಪಕ್ಷಿಗಳು, ಪ್ರಾಣಾಪಾನಗಳು, ಭತ್ತಜವೆಗಳು, ತಪಸ್ಸು, ಶ್ರದ್ಧೆ, ಸತ್ಯ, ಬ್ರಹ್ಮಚರ್ಯೆ, ವಿಧಿ–ಇವೆಲ್ಲವೂ ಹುಟ್ಟಿರುತ್ತವೆ. ಏಳು ಪ್ರಾಣಗಳೂ, ಏಳು ಜ್ವಾಲೆಗಳು, ಏಳು ಸಮಿತ್ತುಗಳು, ಏಳು ಹೋಮಗಳು, ಈ ಏಳು ಲೋಕಗಳು–ಇವು ಆತನಿಂದಲೇ ಆಗುತ್ತವೆ. ಈ ಲೋಕಗಳಲ್ಲಿಯೇ ಗುಹೆಗಳಲ್ಲಿ ಏಳೇಳಾಗಿಬಿಟ್ಟಿರುವ ಪ್ರಾಣಗಳೂ ಸಂಚರಿಸುತ್ತಿರುವವು. ಈತನಿಂದಲೇ ಸಮುದ್ರಗಳೂ ಪರ್ವತಗಳೂ ಆಗಿರುವವು; ಎಲ್ಲಾ ನದಿಗಳೂ ಬಲುಬಗೆಯಿಂದ ಈತನಿಂದಲೇ ಹರಿಯುತ್ತಿ ರುವವು; ಈತನಿಂದಲೇ ಎಲ್ಲಾ ಓಷಧಿಗಳೂ ರಸವೂ ಆಗಿರುವವು, ಈ ರಸದಿಂದ ಅಂತರಾತ್ಮವು ಭೂತಗಳೊಡನೆ ಕೂಡಿಕೊಂಡು ನಿಂತುಕೊಂಡಿರುವದು. ಕರ್ಮ, ಉಪಾಸನೆ–ಇದೆಲ್ಲವೂ ಪುರುಷನೇ, ಹೆಚ್ಚಿನದಾದ ಅಮೃತವಾದ ಬ್ರಹ್ಮವೇ. ಅಪ್ಪ, ಗುಹೆಯಲ್ಲಿರುವ ಇದನ್ನು*

ಯಾವನು ಅರಿತುಕೊಳ್ಳುತ್ತಾನೋ ಅವನು ಅವಿದ್ಯಾಗ್ರಂಥಿಯನ್ನು ಇಲ್ಲಿಯೇ ಕಳಚಿಕೊಳ್ಳುತ್ತಾನೆ.''

ಸಂಕ್ಷೇಪದಿಂದ ಅಕ್ಷರನೆಂಬ ನಿರ್ವಿಶೇಷನಾದ ಪರಮಾರ್ಥಸತ್ಯನಾದ ಪುರುಷನನ್ನು ಹೇಳಿದ್ದಾಯಿತು. ಮೇಲಿನ ಮಂತ್ರಗಳಲ್ಲಿ ಅದನ್ನೇ ಸವಿಶೇಷರೂಪದಿಂದ ವಿವರಿಸಿರುತ್ತದೆ. ಏಕೆಂದರೆ ಸಂಗ್ರಹವಾಗಿ ಹೇಳಿದ್ದನ್ನೇ ಮತ್ತೆ ವಿವರಿಸಿದರೆ ಸುಲಭವಾಗಿ ತತ್ತ್ವವನ್ನು ತಿಳಿದುಕೊಳ್ಳಬಹುದಾಗುತ್ತದೆ.

ಸಂಗ್ರಹವಾಗಿ ಹೇಳಿದರೆ ಪುರುಷನು ಸ್ವಯಂಪ್ರಕಾಶನಾಗಿ ಅದ್ವಿತೀಯನಾದ ಚಿನ್ಮಾತ್ರನಾಗಿರುತ್ತಾನೆ; ಅವನಿಗಿಂತ ಬೇರೆಯಾಗಿ ಮತ್ತೆ ಏನೇನೂ ಇಲ್ಲವೇ ಇಲ್ಲ. ಹಾಗಾದರೆ ನಮ್ಮೆದುರಿಗೆ ಕಾಣುವ ಈ ವಿಶ್ವವು ಎಲ್ಲಿಂದ ಬಂತು? ಇದರಲ್ಲಿ ಎಷ್ಟು ವಿಶೇಷಗಳಿವೆ! ಎಷ್ಟು ವೈಚಿತ್ರ್ಯವಿದೆ! ಎಷ್ಟು ವಿಭಾಗಗಳಿವೆ! ಎಷ್ಟು ಭೇದವಿದೆ! ಇದೆಲ್ಲ ನಿರ್ವಿಶೇಷನೂ ನಿರ್ವಿಭಾಗನೂ ಆದ ಪುರುಷನಿಂದ ಬಂದಿದೆಯೆ? – ಎಂದರೆ ನಿಜ; ಎಲ್ಲವೂ ಆತನಿಂದಲೇ ಬಂದಿರುತ್ತದೆ, ಆತನೇ ಆಗಿರುತ್ತದೆ. ಅದನ್ನು ಸ್ವಲ್ಪ ವಿವರವಾಗಿ ಹೇಳುವದೇ ಮೇಲಿನ ಮಂತ್ರಗಳ ಉದ್ದೇಶವು.

ಮೊಟ್ಟಮೊದಲು ಈ ಇಡಿಯ ಸ್ಥೂಲಪ್ರಪಂಚವನ್ನು ತೆಗೆದುಕೊಳ್ಳಿರಿ. ಇದನ್ನೆಲ್ಲ ನನ್ನ ಶರೀರವೆಂದು ಅಭಿಮಾನಪಡುವ ಆತ್ಮನಿಗೆ ವಿರಾಟ್ಪುರುಷನೆಂದು ಹೆಸರು. ಈ ಪುರುಷನ ವರ್ಣನೆಯನ್ನು ಪುರಾಣಗಳಲ್ಲಿ ಬಗೆಬಗೆಯಾಗಿ ಕೊಟ್ಟಿರುತ್ತದೆ. ಅದರ ಸಾರವೆಲ್ಲ ಇಷ್ಟೇ: ವಿರಾಟ್ಪುರುಷನ ಶರೀರದಲ್ಲಿ ಅಡಕವಾಗದೆ ಇರುವ ಪ್ರಪಂಚವು ಯಾವದೊಂದೂ ಇಲ್ಲ. ನಮ್ಮ ಶರೀರವು ನಮಗೆ ಹೇಗೆ ನಮ್ಮದೆಂದು ತಿಳಿವಿಗೆ ಆಸ್ಪದವಾಗಿರುತ್ತದೆಯೋ ಆ ವಿರಾಟ್ಪುರುಷನಿಗೆ ಈ ಸ್ಥೂಲಪ್ರಪಂಚವೆಲ್ಲವೂ ಹಾಗೆಯೇ ಇರುತ್ತದೆ. ಈ ವಿರಾಟ್ಪುರುಷನು ಎಲ್ಲಿಂದ ಬಂದನು? ಆ ಅಕ್ಷರವೆಂಬ ಸತ್ಯಪುರುಷನಿಂದಲೇ. ಆ ಸತ್ಯಪುರುಷನಿಗಿಂತ ಬೇರೆಯಾಗಿ ಯಾವ ವಿರಾಟ್ಪುರುಷನೂ ಇರುವದಿಲ್ಲ.

ಎರಡನೆಯದಾಗಿ ಈ ಪ್ರಪಂಚದಲ್ಲಿ ಕಾಣುವ ಪ್ರಜೆಗಳನ್ನು ಎಂದರೆ ಜೀವರನ್ನು ತೆಗೆದುಕೊಳ್ಳಿರಿ. ಇವರು ಶಾಸ್ತ್ರೋಕ್ತವಾಗಿ ಕರ್ಮವನ್ನು ಮಾಡಿ ಸ್ವರ್ಗಲೋಕಕ್ಕೆ ಹೋಗಿ ಕರ್ಮಫಲವು ಕ್ಷಯವಾಗಲು ಮಳೆಯ ಮೂಲಕವಾಗಿ ಭೂಮಿಗೆ ಬಂದು ಸಸ್ಯಗಳಲ್ಲಿ ಸೇರಿಕೊಂಡಿದ್ದು ಅದನ್ನು ತಿಂದ ಪುರಷರಿಂದ ರೇತೋರೂಪವಾಗಿ ಸ್ತ್ರೀಯರ ಗರ್ಭವನ್ನು ಸೇರಿ ಮತ್ತೆ ಪ್ರಜೆಗಳಾಗಿ ಹುಟ್ಟುತ್ತಾರೆ. ಅಶಾಸ್ತ್ರೀಯಕರ್ಮವನ್ನು ಮಾಡುವ ಪ್ರಜೆಗಳು

ಕ್ರಿಮಿಕೀಟಾದಿಗಳಾಗಿ ಕೀಳುಜನ್ಮವನ್ನು ಪಡೆಯುತ್ತಾರೆ. ಈ ಪ್ರಜೆಗಳೆಲ್ಲ ಎಲ್ಲಿಂದ ಬಂದರು? ಇವರೆಲ್ಲರೂ ಬಂದದ್ದು ಅಕ್ಷರನೆಂಬ ಸತ್ಯಪುರುಷನಿಂದಲೇ. ಆ ಪುರುಷನಿಗಿಂತ ಬೇರೆಯಾಗಿ ಯಾವ ಪ್ರಜೆಗಳೂ ಇರುವದಿಲ್ಲ.

ಆಮೇಲೆ ಜೀವರು ಮಾಡುವ ಕರ್ಮಕ್ಕೆ ಅಂಗವಾಗಿರುವ ದೇವತೆಗಳು, ಪಶುಗಳು, ಪಕ್ಷಿಗಳು, ಹೋಮದ್ರವ್ಯಗಳು, ತಪಸ್ಸೇ ಮುಂತಾದ ಸಾಧನ, ಅದಕ್ಕೆ ಬೇಕಾದ ಶ್ರದ್ಧೆ, ಸತ್ಯ, ಬ್ರಹ್ಮಚರ್ಯೆ–ಮುಂತಾದವು, ಹೀಗೆ ಕರ್ಮವನ್ನು ಮಾಡಬೇಕೆಂಬ ವಿಧಿ –ಇವೆಲ್ಲವೂ ಪ್ರಪಂಚದಲ್ಲಿ ಕಾಣಬರುತ್ತಿವೆಯಷ್ಟೆ? ಇವು ಎಲ್ಲಿಂದ ಬಂದವು? ಇವೂ ಆ ಸತ್ಯಪುರುಷನಿಂದಲೇ ಬಂದಿವೆ. ಕರ್ಮವನ್ನು ಮಾಡುವ ಜೀವರಂತೆ ಕರ್ಮಾಂಗವಾದ ದ್ರವ್ಯದೇವತಾದಿಗಳೂ ಆತನಿಂದಲೇ ಉಂಟಾಗಿರುತ್ತವೆ; ಇವೂ ಆತನಿಗಿಂತ ಬೇರೆಯಾಗಿರುವದಿಲ್ಲ. ತಿಳಿದು ಅಥವಾ ತಿಳಿಯದೆ ಮಾಡುವವರ ಕರ್ಮಗಳೂ ಕರ್ಮಫಲಗಳೂ ಅವುಗಳ ಸಾಧನಗಳೂ ಅವರ ಶರೀರೇಂದ್ರಿಯಪ್ರಾಣಗಳೂ ಹೊರಗಿನ ಶಬ್ದಾದಿವಿಷಯಗಳೂ ಎಲ್ಲವೂ ಆ ಚೈತನ್ಯಸ್ವರೂಪನಾದ ಅಕ್ಷರನೆಂಬ ಪುರುಷನಿಂದಲೇ ಬಂದಿರುತ್ತವೆ, ಇವೆಲ್ಲವೂ ನಿಜವಾಗಿ ಪುರುಷನೇ ಆಗಿರುತ್ತವೆ.

ಇದೂ ಅಲ್ಲದೆ ಸ್ವತಂತ್ರವಾಗಿ ಹೊರಗೆ ತನಗೆ ತಾನೇ ನಿಂತಿರುವಂತೆ ಕಾಣುತ್ತಿರುವ ಈ ಭೂಲೋಕದಲ್ಲಿ ಕಾಣಬರುತ್ತಿರುವ ಅಗಾಧವಾದ ಸಮುದ್ರಗಳು, ಅತ್ಯುನ್ನತವಾದ ಪರ್ವತಗಳು, ಆ ಪರ್ವತಗಳಿಂದ ಬೇರೆಬೇರೆಯ ದಿಕ್ಕುಗಳಿಗೆ ಹರಿದುಬರುತ್ತಿರುವ ನದಿಗಳು, ಆ ನದಿಗಳ ಆಸರೆಯಿಂದ ಬೆಳೆಯುತ್ತಿರುವ ಮರ ಗಿಡಗಳು, ಪೈರುಪಚ್ಚೆಗಳು; ಆ ಪೈರಿನಿಂದಾಗುವ ಸಿಹಿ, ಕಹಿ–ಮುಂತಾದ ಷಡ್ರಸಗಳು, ಆ ರಸಗಳನ್ನು ಸವಿಯುತ್ತಿರುವ ಸೂಕ್ಷ್ಮಶರೀರ–ಇವೆಲ್ಲವೂ ಎಲ್ಲಿಂದ ಬಂದಿವೆ? ಎಲ್ಲವೂ ಅಕ್ಷರನೆಂಬ ಆ ಸತ್ಯಪುರುಷನೇ. ಆ ಪುರಷನಿಗಿಂತ ಬೇರೆಯಾಗಿ ಇವುಗಳು ಯಾವವೂ ಇರುವದೇ ಇಲ್ಲ.

ಹೆಚ್ಚೇನು? ಅಕ್ಷರನೆಂಬ ಸತ್ಯಪುರುಷನೇ ಇದೆಲ್ಲವೂ. ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ–ಎಂಬ ಯಾವ ಯಾವ ಪ್ರಮಾಣದಿಂದ ಏನೇನನ್ನು ನಾವು ಅರಿಯುತ್ತಿರುವೆವೋ ಏನೇನನ್ನು ಅರಿಯಬಹುದಾಗಿರುವದೋ ಅದೆಲ್ಲವೂ ಆ ಪುರಷನೇ ಹೊರತು ಮತ್ತೆ ಬೇರೆ ಯಾವದೊಂದೂ ಇರುವದೇ ಇಲ್ಲ. ಕ್ರಿಯಾಕಾರಕಫಲರೂಪವಾಗಿ ಕಾಣುವದೆಲ್ಲವೂ ಆ ಅಕ್ಷರನೆಂಬ ಪುರುಷನೇ, ಆ ಅಮೃತಸ್ವರೂಪವಾದ ಬ್ರಹ್ಮದ ಕಾರ್ಯವೇ. ಕಾರಣವಾದ ಮಣ್ಣಿಗಿಂತ ಕಾರ್ಯವಾದ ಮಡಕೆಕುಡಿಕೆಗಳೇ ಮುಂತಾದವು ಯಾವವೂ ಹೇಗೆ ಬೇರೆ ಇರುವದಿಲ್ಲವೋ, ಹೇಗೆ

ಬಗೆಬಗೆಯ ರೂಪ, ಬಗೆಬಗೆಯ ಕಾರ್ಯ, ಬಗೆಬಗೆಯ ನಾಮ–ಇವುಗಳಿಂದ ಕಂಗೊಳಿಸುವ ಮಡಕೆ, ಕುಡಿಕೆ, ಶ್ರಾವೆ–ಮುಂತಾದ್ದೆಲ್ಲವೂ ಬರಿಯ ಮಣ್ಣೇ ಆಗಿರುವದೋ ಅದರಂತೆ ಬಗೆಬಗೆಯ ನಾಮರೂಪಕರ್ಮಗಳಿಂದ ಕಂಗೊಳಿಸುತ್ತಿರುವ ಈ ವಿಶ್ವವೆಲ್ಲವೂ ಆ ಅಕ್ಷರನೆಂಬ ಪುರುಷನೇ, ಆ ಅಮೃತಸ್ವರೂಪವಾದ ಪರಬ್ರಹ್ಮವೇ ಆಗಿರುತ್ತದೆ.

ಹೀಗೆ ನಿರ್ವಿಶೇಷನಾದ ಅಕ್ಷರಪುರುಷನಿಂದಲೇ ಎಲ್ಲವೂ ಆಗಿರುವದೆಂದು ತಿಳಿಸಿದ ಬಳಿಕ ಅಂಗಿರಸ್ಸು ಹೇಳುತ್ತಾನೆ : ಅಪ್ಪ , ಶೌನಕ, ಈ ಪುರುಷನು ಹೀಗೆ ಸರ್ವವನ್ನೂ ತುಂಬಿಕೊಂಡು ಎಲ್ಲವೂ ಆಗಿರುತ್ತಿದ್ದರೂ ಪೂರ್ಣರೂಪನಾದ ಈತನನ್ನು ಜೀವರು ತಮ್ಮತಮ್ಮ ಹೃದಯಗುಹೆಯಲ್ಲಿಯೇ ಇರುವ ಆತ್ಮನೆಂದು ಮೊದಲು ಅರಿತುಕೊಳ್ಳಬೇಕು. ಯಾವ ಸಾಧಕನು ಹೊರಮುಖವಾಗಿರುವ ಇಂದ್ರಿಯಗಳನ್ನು ಬರಸೆಳೆದು ಒಳಮುಖನಾಗಿ ತನ್ನ ಹೃದಯಗುಹೆಯನ್ನು ಹೊಕ್ಕು ಸರ್ವಬುದ್ಧಿ ಪ್ರಯತ್ನಗಳಿಗೂ ಸಾಕ್ಷಿಯಾಗಿರುವ ಈ ಪುರುಷನನ್ನು ಅರಿತುಕೊಳ್ಳುವನೋ, ಯಾವನು ಆ ಬಳಿಕ ಆ ಪುರಷನೇ ಸಕಲವಿಶ್ವವನ್ನೂ ಒಳಗೂ ಹೊರಗೂ ವ್ಯಾಪಿಸಿಕೊಂಡು ಪರಿಪೂರ್ಣನಾಗಿರುವ ಅಮೃತಸ್ವರೂಪವಾಗಿರುವ ಪರಬ್ರಹ್ಮವೆಂಬುದನ್ನೂ ಅರಿತುಕೊಳ್ಳುವನೋ ಅವನಿಗೆ ಹೃದಯದಲ್ಲಿ ಈಗ ಉಂಟಾಗಿರುವ ಅವಿದ್ಯೆಯ ಕಗ್ಗಂಟು ಇಲ್ಲಿಯೇ ಬದುಕಿರುವಾಗಲೇ ಬಿಚ್ಚಿಕೊಳ್ಳುತ್ತದೆ. ಆ ಮಹಾತ್ಮನೇ ಜೀವನ್ಮುಕ್ತನೆನಿಸಿ ಕೃತಕೃತ್ಯನಾಗುವನು.



## 12. ಪರಮಾತ್ಮಸಾಕ್ಷಾತ್ಕಾರಕ್ಕೆ ಓಂಕಾರವನ್ನು ಸಾಧನಮಾಡಿಕೊಳ್ಳಬೇಕು

ಆವಿಃ ಸನ್ನಿಹಿತಂ ಗುಹಾಚರಂ ನಾಮ
ಮಹತ್ಪದಮತ್ರೈತತ್ಸಮರ್ಪಿತಮ್ ।
ಏಜತ್ ಪ್ರಾಣನ್ನಿಮಿಷಚ್ಚ ಯದೇತಜ್ಜಾನಥ ಸದಸದ್ವರೇಣ್ಯಂ
ಪರಂ ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಮ್ ॥1॥

ಯದರ್ಚಿಮದ್ ಯದಣುಭ್ಯೋಽಣು ಚ
ಯಸ್ಮಿಂಲ್ಲೋಕಾ ನಿಹಿತಾ ಲೋಕಿನಶ್ಚ ।
ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ
ತದೇತತ್ ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ ॥2॥

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ
ಶರಂ ಹ್ಯುಪಾಸಾನಿಶಿತಂ ಸಂದಧೀತ
ಆಯಮ್ಯ ತದ್ಭಾವಗತೇನ ಚೇತಸಾ
ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥3॥

ಪ್ರಣವೋ ಧನುಃ ಶರೋ ಹ್ಯಾತ್ಮಾ
ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ
ಶರವತ್ ತನ್ಮಯೋ ಭವೇತ್ ॥4॥

*"ಗುಹಾಚರವೆಂಬ ಈ ದೊಡ್ಡ ಸ್ಥಾನವು ಚೆನ್ನಾಗಿ ಕಾಣಿಸಿಕೊಳ್ಳುತ್ತಾ, ನಮ್ಮ ಹತ್ತಿರವೇ ಇದ್ದುಕೊಂಡಿರುವದು, ಓಡಾಡುವ, ಉಸಿರಾಡುವ, ಕಣ್ಣುಮಿಟುಕಿಸುವ (ಪ್ರಾಣಿ)ಗಳೆಲ್ಲವೂ ಇದರಲ್ಲಿ ಸೇರಿಕೊಂಡಿರುತ್ತವೆ. ಇರುವದೂ ಇಲ್ಲದ್ದೂ ಬೇಕೆನಿಸುವಂಥದ್ದೂ ಜನರ ಅರಿವಿಗಾಚೆಯಿರುವಂಥದ್ದೂ , ಆಗಿರುವ ಈ ಅತ್ಯಂತ ಶ್ರೇಷ್ಠವಾದ ತತ್ತ್ವವನ್ನು ಅರಿತುಕೊಳ್ಳಿರಿ. ಯಾವದು ಪ್ರಕಾಶವುಳ್ಳದ್ದೋ, ಯಾವದು ಅಣುಗಳಿಗೆಲ್ಲ ಅಣುವೋ, ಯಾವದರಲ್ಲಿ ಲೋಕಗಳೂ ಲೋಕಿಗಳೂ ಇದ್ದುಕೊಂಡಿರುವರೋ, ಅದೇ ಈ ಅಕ್ಷರವೆಂಬ ಬ್ರಹ್ಮವು. ಅದೇ ಪ್ರಾಣವು, ಅದೇ ವಾಕ್ಕು , ಅದೇ ಮನಸ್ಸು. ಆ ಇದೇ ಸತ್ಯವು, ಅದೇ ಮರಣವಿಲ್ಲದ್ದು*

*ಅದೇ ಗುರಿಯಿಟ್ಟು ಹೊಡೆಯಬೇಕಾದ್ದು. ಅಯ್ಯ, ಅದನ್ನು ಹೊಡೆ! ಮಹಾಸ್ತ್ರವಾದ ಉಪನಿಷತ್ತುಗಳ ಬಿಲ್ಲನ್ನು ಹಿಡಿದುಕೊಂಡು ಉಪಾಸನೆಯಿಂದ ಹರಿತವಾದ ಬಾಣವನ್ನು ಅದರಲ್ಲಿ ಹೂಡಬೇಕು. ಅದರ ಭಾವನೆಯಿಂದೊಡಗೂಡಿದ ಚಿತ್ತದಿಂದ ಅದನ್ನೆಳೆದು, ಅಯ್ಯ, ಆ ಅಕ್ಷರವೆಂಬ ಗುರಿಯನ್ನೇ ಹೊಡೆ! ಪ್ರಣವವೇ ಬಿಲ್ಲು , ಆತ್ಮನೇ ಬಾಣ, ಆ ಬ್ರಹ್ಮವೇ ಲಕ್ಷ್ಯವೆನಿಸುವದು. ಎಚ್ಚರಿಕೆಯಿಂದ ಅದನ್ನು ಹೊಡೆಯಬೇಕು, ಬಾಣದಂತೆ ತನ್ಮಯನಾಗಬೇಕು.''*

ಅಕ್ಷರವೆಂಬ ಪರಮಾರ್ಥಸತ್ಯವನ್ನು ಅರಿತುಕೊಂಡರೆ, ಅವಿದ್ಯೆಯ ಗಂಟನ್ನೂ ಈಗಲೇ ಇಲ್ಲಿಯೇ ಬಿಚ್ಚಿಕೊಳ್ಳಬಹುದೆಂದು ಹೇಳಲಾಯಿತು. ಆದರೆ ಯಾವ ಆಕಾರವೂ ಇಲ್ಲದ ಅದನ್ನು ಅರಿತುಕೊಳ್ಳುವ ಬಗೆ ಹೇಗೆ? ಎಲ್ಲವೂ ಅದೇ ಆಗಿರುವಲ್ಲಿ ಅದನ್ನು ಹೃದಯದಲ್ಲಿಯೇ ಅರಿತುಕೊಳ್ಳಬೇಕಾದದ್ದೇನು? ಅಲ್ಲಿ ಅದನ್ನು ಹೇಗೆ ಅರಿತುಕೊಳ್ಳಬಹುದು?–ಎಂಬ ಪ್ರಶ್ನೆಗಳು ಎದ್ದುಕೊಳ್ಳಬಹುದಷ್ಟೆ; ಆ ಪ್ರಶ್ನೆಗಳಿಗೆ ಇಲ್ಲಿ ಉತ್ತರವನ್ನು ಕೊಟ್ಟಿದೆ.

ಲೋಕದಲ್ಲಿರುವ ಅಂಡಜ, ಸ್ವೇದಜ, ಉದ್ಭಿಜ , ಜರಾಯುಜ–ಎಂಬ ನಾಲ್ಕು ರಾಶಿಯ ಪ್ರಾಣಿಗಳೂ ಈ ಅಕ್ಷರದಿಂದಲೇ ಬಂದಿರುತ್ತವೆ. ಪ್ರಾಣಿಗಳ ಶರೀರವಾಗಲಿ ಜಡವಸ್ತುಗಳ ರೂಪವಾಗಲಿ ಮೂರ್ತವಾಗಿಯೂ ಅಮೂರ್ತವಾಗಿಯೂ ಕಾಣಬರುವ ಪಂಚಭೂತಗಳನ್ನು ಬಿಟ್ಟು ಬೇರೆಯಿರುವದಿಲ್ಲ. ಈ ಮೂರ್ತಾಮೂರ್ತಗಳೆಂಬ ಸದಸತ್ತುಗಳು ಅಕ್ಷರದಿಂದಲೇ ಬಂದಿರುತ್ತವೆ. ಅದರ ರೂಪದಿಂದಲೇ ಸತ್ಯವಾಗಿರುತ್ತವೆ. ಯಾವ ಪ್ರಾಣಿಗಳಲ್ಲಿಯೇ ಆಗಲಿ ಅವುಗಳಿಗೆ ಅತ್ಯಂತಪ್ರಿಯವಾಗಿರುವ ನಾನು ಎಂಬ ರೂಪದಿಂದ ಪರಮಪ್ರೇಮಕ್ಕೆ ಆಸ್ಪದವಾಗಿರುವ ವಸ್ತುವು ಈ ಅಕ್ಷರವೆಂಬ ಸತ್ಯವಾದ ಆತ್ಮನೇ ಆಗಿರುತ್ತದೆ. ಆದ್ದರಿಂದ ಎಲ್ಲವೂ ಈ ಅಕ್ಷರವೆಂಬ ಪರಮಾತ್ಮನೇ ಆಗಿದ್ದರೂ ಆ ಪರತತ್ತ್ವವನ್ನು ನಾವು 'ನಾನು' ಎಂಬ ರೂಪದಿಂದ ತೀರ ಹತ್ತಿರವಾಗಿ, ಎಂದರೆ ನಮ್ಮನಮ್ಮೊಳಗೇ, ನಮ್ಮ ನಮ್ಮ ಹೃದಯದಲ್ಲಿಯೇ, ಪ್ರಕಟವಾಗಿರುವದನ್ನು ಕಾಣಬಹುದಾಗಿದೆ. ಸಮಸ್ತಚರಾಚರ ಪ್ರಪಂಚಕ್ಕೂ ಕಾರಣವಾಗಿರುವ ಈ ಪರಮಾರ್ಥವು ನಮ್ಮಲ್ಲಿಯೇ ನೋಡುವದು, ಕೇಳುವದು–ಮುಂತಾದ ರೀತಿಗಳಿಂದ ನಮಗೆ ಹೀಗೆ ಗೋಚರವಾಗಿದ್ದುಕೊಂಡು ನಮ್ಮ ಹೃದಯದಲ್ಲಿಯೇ ಇರುವದರಿಂದ ಇದಕ್ಕೆ **'ಗುಹಾಚರ'** (ಹೃದಯಗುಹೆಯಲ್ಲಿ ಸಂಚರಿಸುತ್ತಿರುವದು) ಎಂಬ ಹೆಸರು ಬಂದಿರುತ್ತದೆ. ಆದ್ದರಿಂದ ಇದನ್ನು ಇಲ್ಲಿಯೇ ಅರಿತುಕೊಳ್ಳುವದು ನಮಗೆ ಸುಲಭವಾಗಿರುತ್ತದೆ.

ಹೃದಯದಲ್ಲಿ 'ನಾನು' 'ನಾನು' ಎಂಬ ರೂಪದಿಂದ ಇದು ಪ್ರಕಟವಾಗಿದ್ದರೂ ನೋಡುವದು, ಕೇಳುವದು, ಮೂಸುವದು, ಮುಟ್ಟುವದು–ಮುಂತಾದ ರೂಪಗಳಿಂದ

ಇದು ಇಲ್ಲಿ ವಿಹರಿಸುತ್ತಿದ್ದರೂ ಈ ರೂಪವೇನೂ ಇದರ ಪರಮಾರ್ಥಸ್ವರೂಪವಲ್ಲ. ನಮ್ಮೊಳಗಿನ ವೃತ್ತಿಗಳೂ ಇವುಗಳಿಗೆ ಗೋಚರವಾಗಿ ಹೊರಗೆ ಕಾಣಿಸುವ ವಿಷಯಗಳೂ ಇದರ ಮೇಲುಮುಸುಕಿನ ಮಾಯಾರೂಪವುಮಾತ್ರವಾಗಿದೆ. ಇದರ ಪರಮಾರ್ಥ ಸ್ವರೂಪವು ನಮ್ಮ ಅರಿವಿಗೆ ವಿಷಯವಾಗದೆ ಇರುತ್ತದೆ ; ಆದರೂ ಅದೇ ನಮ್ಮಲ್ಲಿ ತೋರುವ ಆನಂದದ ಉಕ್ಕಂದವಾಗಿರುತ್ತದೆ.

ಇದು ಅತ್ಯಂತ ಪ್ರಕಾಶರೂಪವಾದದ್ದು, ಆದರೂ ಸರಿಯಾಗಿ ನೋಡದಿದ್ದರೆ ಕಾಣುವದಿಲ್ಲ. ಇದು ತೀರ ದೊಡ್ಡದಾಗಿರುವ ಭೂಗೋಳಸೂರ್ಯಗೋಳವೇ ಮುಂತಾದವುಗಳೆಲ್ಲವನ್ನೂ, ವಿಸ್ತಾರವಾಗಿರುವ ಲೋಕಗಳನ್ನೂ ಅವುಗಳಲ್ಲಿರುವ ನಿವಾಸಿಗಳನ್ನೂ ತನ್ನೊಳಗೇ ಅಡಕಮಾಡಿಕೊಂಡಿರುತ್ತದೆ; ಆದರೂ ಬಹುಸೂಕ್ಷ್ಮವಾಗಿರುವ ಕಾಲಾಕಾಶಪರಮಾಣುಗಳೇ ಮುಂತಾದವುಗಳಿಗಿಂತಲೂ ಸೂಕ್ಷ್ಮವಾಗಿರುತ್ತದೆ. ಅದರಲ್ಲಿ ಲೋಕಗಳೆಲ್ಲವೂ ಇದ್ದರೂ ಲೋಕಗಳ ಕಡೆಗೆ ನೋಡುವ ಹೊರಗಣ್ಣಿಗೆ ಅದು ಗೋಚರವಾಗಲಾರದು. ನಮ್ಮ ಪ್ರಾಣವೂ ಮನಸ್ಸೂ ಇಂದ್ರಿಯಗಳೂ ಅದೇ ಆಗಿರುತ್ತವೆ; ಆದರೆ ಪ್ರಾಣಾದಿರೂಪಗಳಿಂದ ನೋಡಿದಾಗ ಅದರ ನಿಜವಾದ ಸ್ವರೂಪವು ನಮಗೆ ಗೋಚರವಾಗದು, ಏಕೆಂದರೆ ಅದರ ಸ್ವರೂಪದಲ್ಲಿ ಮನಸ್ಸಾಗಲಿ ಪ್ರಾಣವಾಗಲಿ ಇಂದ್ರಿಯಗಳಾಗಲಿ ನಿಜವಾಗಿ ಇರುವದೇ ಇಲ್ಲ. ಇಂಥ ಅದ್ಭುತಮಹಿಮೆಯದು, ಈ 'ಅಕ್ಷರ'ವೆಂಬ ಪರಮಾರ್ಥಸತ್ಯವಾದ ತತ್ತ್ವವು ! ಆದ್ದರಿಂದ ಅದನ್ನು ಲಕ್ಷ್ಯವಿಟ್ಟು ನಮ್ಮ ಹೃದಯದಲ್ಲಿಯೇ ನೋಡಿಕೊಂಡು ಅರಿಯಬೇಕೆಂದು ಹೇಳಿದ್ದು ಸರಿಯೇ ಆಗಿದೆ.

ಅಕ್ಷರವನ್ನು ಗುರಿಯಿಟ್ಟು ಅರಿತುಕೊಳ್ಳುವದಕ್ಕೆ ಮಾಡುವ ಅಧ್ಯಾತ್ಮಸಾಧನವನ್ನು, ಬಿಲ್ಗಾರನಾದವನು ಗುರಿಯನ್ನು ಬಾಣದಿಂದ ಹೊಡೆಯುವ ಕೆಲಸಕ್ಕೆ ಹೋಲಿಸಬಹುದು. ಏಕೆಂದರೆ ಗುರಿಯನ್ನು ಹೊಡೆಯುವಾಗ ಮೊಟ್ಟಮೊದಲು ಒಂದು ಒಳ್ಳೆಯ ಬಿಲ್ಲು ಬೇಕಾಗುತ್ತದೆ , ಈ ಸಾಧನದಲ್ಲಿಯೂ ಬಿಲ್ಲಿನಂತಿರುವ ಓಂಕಾರವು ಬೇಕಾಗಿರುತ್ತದೆ. ಬಿಲ್ಲಿಗೆ ತಕ್ಕ ಹರಿತವಾದ ಬಾಣವೂ ಇಲ್ಲದಿದ್ದರೆ ಗುರಿಯನ್ನು ಹೊಡೆಯುವ ಕೆಲಸವು ನೆರವೇರದಷ್ಟೆ; ಈ ಸಾಧನದಲ್ಲಿ ಉಪಾಸನೆಯಿಂದ ಹರಿತವಾಗಿ ಮಾಡಿದ ಅಂತಃಕರಣದಿಂದೊಡಗೂಡಿದ ಆತ್ಮನೇ ಬಾಣದಂತೆ ಇರುತ್ತಾನೆ. ಏಕೆಂದರೆ ಹೇಗೆ ಬಾಣವು ಗುರಿಯನ್ನು ಹೋಗಿ ಸೇರಬೇಕಾಗಿರುವದೋ ಹಾಗೆ ಈ ಆತ್ಮನೂ ತನ್ನ ಪರಮಾರ್ಥಸ್ವರೂಪವಾದ ಅಕ್ಷರಬ್ರಹ್ಮದಲ್ಲಿ ಸೇರಬೇಕಾಗಿರುತ್ತದೆ. ಬಿಲ್ಲಿನಲ್ಲಿ ಬಾಣವನ್ನು ಹೂಡಿದ ಮೇಲೆ ಆ ಗುರಿಯ ಭಾವನೆಯಿಂದಲೇ ಭಾವಿತವಾಗಿರುವ ಮನಸ್ಸಿರಬೇಕು; ಆ ಭಾವನೆಯಿಂದ ನೋಡಿದಾಗಲೇ ಅತ್ತಿತ್ತ ಅಲುಗದೆ ಗುರಿಯಲ್ಲಿಯೇ ನೆಟ್ಟ ನೋಟವು ಲಭಿಸುತ್ತದೆ. ಅದರಂತೆ ಇಲ್ಲಿಯೂ ಹೊರಗಿನ ವಿಷಯಗಳಲ್ಲಿ ಬಯಲಾಸೆಯನ್ನಿಟ್ಟುಕೊಳ್ಳದೆ ಎಚ್ಚರಿಕೆಯಿಂದ ಇಂದ್ರಿಯಗಳನ್ನು ಬಿಗಿಹಿಡಿದುಕೊಂಡು ಗುರಿಯಾದ ಅಕ್ಷರವೆಂಬ ಒಂದೇ

ಕಡೆಯಲ್ಲಿ ನೆಟ್ಟಭಾವನೆಯಿಂದ ಆತ್ಮನೆಂಬ ಬಾಣವನ್ನು ಬಿಡಬೇಕಾಗುತ್ತದೆ. ಸರಿಯಾದ ಬಿಲ್ಲಿನಲ್ಲಿ ತಕ್ಕ ಬಾಣವನ್ನು ಹೂಡಿ ಎಚ್ಚರಿಕೆಯಿಂದಲೂ ಗುರಿಯಿಟ್ಟು ನೋಟದಿಂದಲೂ ಹೊಡೆದರೆ, ಬಾಣವು ಹೇಗೆ ಅವಶ್ಯವಾಗಿ ತನ್ನ ಗುರಿಯಲ್ಲಿಯೇ ಹೋಗಿ ಐಕ್ಯವಾಗಿ ಬಿಡುವದೋ ಅದರಂತೆ ಇಲ್ಲಿಯೂ ವೈರಾಗ್ಯ, ಅಭ್ಯಾಸ–ಎಂಬ ಸಾಧನಗಳಿಂದ ಧ್ಯಾನಸಂಸ್ಕೃತವಾದ ಚಿತ್ತವನ್ನು ಅಕ್ಷರದ ಸ್ವರೂಪದ ಕಡೆಗೆ ತಿರುಗಿಸಿ ಹೊಡೆದರೆ ಅಕ್ಷರವೆಂಬ ಗುರಿಯಲ್ಲಿ ಬಾಣದಂತಿರುವ ಆತ್ಮನು ಐಕ್ಯವಾಗಿಬಿಡುತ್ತಾನೆ. ಇದಕ್ಕೆ ಅಧ್ಯಾತ್ಮಯೋಗವೆಂದು ಹೆಸರು.

ಅಲಂಕಾರದ ಭಾಷೆಯನ್ನು ಬದಿಗಿಟ್ಟರೆ ಈ ಮಂತ್ರಗಳ ಅರ್ಥವು ಹೀಗಾಗುವದು: ಅಕ್ಷರವೆಂಬ ಪರಮಾರ್ಥಸತ್ಯವೇ ಈ ವಿಶ್ವದ ಆಕಾರವಾಗಿ ತೋರುತ್ತಿರುವದಾದರೂ ಅದು ಇದ್ದಂತೆಯೇ ಅರಿತುಕೊಳ್ಳಬೇಕೆನ್ನುವವರು ತಮ್ಮ ತಮ್ಮ ಆತ್ಮನನ್ನೇ ಮೊದಲು ನೋಡುವದಕ್ಕೆ ಪ್ರಯತ್ನಮಾಡಬೇಕು. ಹೊರಗಿನ ವಿಷಯಗಳ ಕಡೆಗೆ ಹರಿಯುವ ಇಂದ್ರಿಯಗಳನ್ನು ಮೊದಲು ಹಿಮ್ಮೆಟ್ಟಿಸಿಕೊಂಡು ಆಮೇಲೆ ಚಿತ್ತವನ್ನು ಧ್ಯಾನದಿಂದ ಚೆನ್ನಾಗಿ ಸಂಸ್ಕಾರಮಾಡಿ ಈ ಆತ್ಮನ ಕಡೆಗೆ ತಿರುಗಿಸಬೇಕು. ಈ ಆತ್ಮನು ನೋಡುವವನು, ಕೇಳುವವನು, ಆಲೋಚಿಸುವವನು, ಅರಿಯುವವನು–ಎಂಬಿವೇ ಮುಂತಾದ ರೂಪಗಳಿಂದ ಈಗ ಕಾಣಿಸುತ್ತಿರುವದು ನಿಜ. ಆದರೆ ಸಾವಧಾನವಾಗಿ ನೋಡುವವರಿಗೆ ಈ ನೋಡುವದೇ ಮುಂತಾದ ಪ್ರತ್ಯಯಗಳಿಗೆ ಸಾಕ್ಷಿಯಾಗಿಯೇ ಅವನು ಕಾಣಿಸಿಕೊಳ್ಳುತ್ತಾನೆ. ಆತ್ಮನನ್ನು ಹೀಗೆ ಸಾಕ್ಷಿಯೆಂದು ನಾವು ಎಣಿಸುವದೂ ಎಚ್ಚರಕನಸುಗಳಲ್ಲಿ ಕಾಣಬರುವ ನೋಟವೇ ಮುಂತಾದ ಉಪಾಧಿಗಳ ದೃಷ್ಟಿಯಿಂದಲೇ ಹೊರತು ಆತ್ಮನ ಸ್ವರೂಪದ ದೃಷ್ಟಿಯಿಂದಲ್ಲ. ಗಾಢನಿದ್ರೆಯನ್ನೂ ಈ ಎರಡವಸ್ಥೆಗಳ ಜೊತೆಗೆ ವಿಮರ್ಶೆಗೆ ತೆಗೆದುಕೊಂಡರೆ ಆಗ ಆತ್ಮನಿಗೆ ನಿಜವಾಗಿ ಯಾವ ಉಪಾಧಿಯ ಹಂಗೂ ಇರುವದಿಲ್ಲವೆಂಬುದು ಗೊತ್ತಾಗುತ್ತದೆ ; ಈ ಉಪಾಧಿಗಳೆಲ್ಲವೂ ಆತ್ಮನಲ್ಲಿಯೇ ಕಲ್ಪಿತವಾಗಿರುವದರಿಂದ ಅವನಿಗಿಂತ ಬೇರೆಯಾಗಿ ಇಲ್ಲವೇ ಇಲ್ಲವೆಂಬುದೂ ಮನಸ್ಸಿನಲ್ಲಿ ಮಿಂಚುತ್ತದೆ. ಆಗ ಈ ಆತ್ಮನೇ ವಾಙ್ಮನಗಳನ್ನು ಮೀರಿದ ನಿರುಪಾಧಿಕವಾದ ಅಕ್ಷರನಾಗಿರುತ್ತಾನೆಂದೂ ಅನುಭವಕ್ಕೆ ಬಂದುಬಿಡುತ್ತದೆ. ಹೃದಯದಲ್ಲಿ ಅಕ್ಷರವನ್ನು ಅರಿತುಕೊಳ್ಳಬೇಕೆಂಬ ಉಪದೇಶಕ್ಕೆ ಇದೇ ಅಭಿಪ್ರಾಯವು.

ಅಕ್ಷರಸತ್ಯದ ಅನುಭವಕ್ಕೆ ಓಂಕಾರದ ಧ್ಯಾನವೂ ಜ್ಞಾನವೂ ಪರಮೋಪಾಯವಾಗಿರುತ್ತವೆ. ಓಂಕಾರದ ಉಪಾಸನೆಯ ರೀತಿಯನ್ನು ಪ್ರಶ್ನೋಪನಿಷತ್ತಿನಲ್ಲಿಯೂ ಅದರ ಸ್ವರೂಪದ ಜ್ಞಾನವನ್ನು ಮಾಂಡೂಕ್ಯದಲ್ಲಿಯೂ ಕಾಣಬಹುದು. ಜ್ಞಾನಿಗಳ ದೃಷ್ಟಿಯಲ್ಲಿ ಈ ಓಂಕಾರವೂ ಆತ್ಮನೂ ಅಕ್ಷರವೂ ನಿರ್ವಿಭಾಗವಾದ ನಿರ್ದ್ವೈತವಾದ ಒಂದೇ ತತ್ತ್ವವಾಗಿರುತ್ತದೆ.



# 13. ಓಂಕಾರದ ಮೂಲಕ ಹೃದಯಸ್ಥನಾದ ಪರಮಾತ್ಮನನ್ನು ಚಿಂತಿಸುವ ರೀತಿ

ಯಸ್ಮಿನ್ ದ್ಯೌಃ ಪೃಥಿವೀ ಚಾನ್ತರಿಕ್ಷಮೋತಂ
ಮನಃ ಸಹ ಪ್ರಾಣೈಶ್ಚ ಸರ್ವೈಃ।
ತಮೇವೈಕಂ ಜಾನಥ ಆತ್ಮಾನಮನ್ಯಾ
ವಾಚೋ ವಿಮುಞ್ಚಥಾಮೃತಸ್ಯೈಷ ಸೇತುಃ ॥5॥

ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ
ಸ ಏಷೋಽನ್ತಶ್ಚರತೇ ಬಹುಧಾ ಜಾಯಮಾನಃ।
ಓಮಿತ್ಯೇವಂ ಧ್ಯಾಯಥ ಆತ್ಮಾನಂ
ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್ ॥6॥

*"ಯಾವನಲ್ಲಿ ಸ್ವರ್ಗಲೋಕವೂ ಭೂಲೋಕವೂ ಅಂತರಿಕ್ಷ ಲೋಕವೂ ಎಲ್ಲಾ ಪ್ರಾಣಗಳೊಡಗೂಡಿರುವ ಮನಸ್ಸೂ ಹೆಣೆದುಕೊಂಡಿರುವವೋ ಆ ಆತ್ಮನನ್ನೊಬ್ಬನನ್ನೇ ಅರಿತುಕೊಳ್ಳಿರಿ, ಮಿಕ್ಕಮಾತುಗಳೆಲ್ಲವನ್ನೂ ಬಿಡಿರಿ. ಇದೇ ಅಮೃತಕ್ಕೆ ಸೇತುವೆಯಾಗಿರುತ್ತದೆ. ಚಕ್ರದ ಗುಂಬದಲ್ಲಿ ಹಾರೆಕೋಲುಗಳಂತೆ ಎಲ್ಲಿ ನಾಡಿಗಳೆಲ್ಲ ಸೇರಿಕೊಂಡಿರುವವೋ ಅದರೊಳಗೆ ಈತನು ಬಲುಬಗೆಯಿಂದ ಆಗುತ್ತಾ ಸಂಚರಿಸುತ್ತಿರುವನು. ಈ ಆತ್ಮನನ್ನು ಓಂಕಾರವೆಂದು ಧ್ಯಾನಿಸಿರಿ. ಕತ್ತಲೆಯಿಂದಾಚೆಗಿರುವ ದಡಕ್ಕೆ ಹೋಗುತ್ತಿರುವ ನಿಮಗೆ ಸ್ವಸ್ತಿಯಾಗಲಿ!"*

ಆತ್ಮನನ್ನು ಓಂಕಾರದ ಮೂಲಕವಾಗಿ ಭಾವಿಸಬೇಕೆಂದು ಹಿಂದೆ ಹೇಳಿತ್ತಷ್ಟೆ. ಆ ಅಕ್ಷರರೂಪನಾದ ಭಗವಂತನ ಸ್ವರೂಪವನ್ನೇ ಇಲ್ಲಿ ವರ್ಣಿಸಿರುತ್ತಾರೆ. ಈ ಮೊದಲೇ ತಿಳಿಸಿರುವಂತೆ ಭೂಲೋಕ, ಭುವರ್ಲೋಕ, ಸುವರ್ಲೋಕ–ಎಂಬ ಮೂರು ಲೋಕಗಳಲ್ಲಿ ಏನೇನಿದೆಯೋ ಎಲ್ಲವೂ ಆತ್ಮನಿಂದಲೇ ಬಂದಿರುತ್ತವೆ. ಬಟ್ಟೆಯು ನೂಲೆಳೆಯನ್ನು ಬಿಟ್ಟು ಬೇರೆ ಕದಲದಿರುವಂತೆ ಇದೆಲ್ಲವೂ ಆತ್ಮನಲ್ಲಿಯೇ ಹೆಣೆದುಕೊಂಡಿರುತ್ತದೆ. ಬಟ್ಟೆಯ ದೃಷ್ಟಿಯಿಂದ ನೋಡಿದಾಗ ನೂಲಿನ ನೆನಪು ನಮಗೆ ಬರದೆ ಇರಬಹುದು. ಆದರೆ ನಿಜವಾಗಿ ಬಟ್ಟೆಯೆಂಬುದು ಯಾವಾಗಲೂ ನೂಲೇ ಆಗಿರುವದಲ್ಲವೆ? ಇದರಂತೆ ಮೂರು ಲೋಕಗಳಲ್ಲಿ ಬಗೆಬಗೆಯಾಗಿ ನಮ್ಮ ಹೊರಗೆ ಕಾಣುತ್ತಿರುವದೆಲ್ಲವೂ ಈ ಆತ್ಮನಲ್ಲಿಯೇ ಹೆಣೆದುಕೊಂಡಿರುತ್ತದೆ, ಈ ಆತ್ಮನೇ ಆಗಿರುತ್ತದೆ.

ಇಷ್ಟೇ ಅಲ್ಲ, ನಮ್ಮೊಳಗೆ ತಾನೇ ಒಂದು ಬೇರೆ ತತ್ತ್ವವೋ ಎಂಬಂತೆ ತೋರುತ್ತಿರುವ ಮನಸ್ಸಿರುವದಷ್ಟೆ. ಈ ಮನಸ್ಸೂ ಆತ್ಮನಲ್ಲಿಯೇ ಹೆಣೆದುಕೊಂಡಿದೆ, ಆತ್ಮನೇ ಆಗಿದೆ. ಈ ಮನಸ್ಸಿಗೆ ಹೊರಗಿನ ಅರಿವನ್ನು ಮಾಡಿಕೊಡುವ ಪ್ರಾಣಗಳು, ಎಂದರೆ ಕರಣಗಳು ಕೂಡ ಈ ಅಕ್ಷರನೆಂಬ ಆತ್ಮನಲ್ಲಿಯೇ ಹೆಣೆದುಕೊಂಡಿವೆ. ಮನಸ್ಸೂ ಪ್ರಾಣವೂ ಆತ್ಮನಿಂದಲೇ ಬಂದಿರುವವೆಂದು ಹಿಂದೆಯೇ ಹೇಳಲಾಗಿದೆಯಷ್ಟೆ. ಆದ್ದರಿಂದ ಈ ಮನಃಪ್ರಾಣಗಳೂ ಆತ್ಮನಲ್ಲಿಯೇ ಹೆಣೆದುಕೊಂಡು ಆತ್ಮರೂಪದಿಂದಲೇ ಇರುತ್ತವೆ.

ಆದ್ದರಿಂದ ಹೊರಗಿನ ಪದಾರ್ಥಗಳೂ ಒಳಗೆ ಅವನ್ನರಿಯುವ ಮನಸ್ಸೂ ಕರಣಗಳೂ ಎಲ್ಲವೂ ಈ ಆತ್ಮನೇ. ಈ ಆತ್ಮನ ಕಡೆಗೆ ಚಿತ್ತವು ತಿರುಗದೆ ಇರುವ ಅವಿವೇಕಿ ಗಳಿಗೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ–ಎಂಬ ಭೇದಗಳು ಕಾಣಿಸುತ್ತಿರುವವು. ಅಂಥ ಬಾಹ್ಯದೃಷ್ಟಿಯುಳ್ಳವರಿಗೆ ಇದನ್ನರಿತು, ಇದನ್ನು ಮಾಡಿ, ಇದನ್ನು ಪಡೆಯುವೆವು–ಎಂಬ ತಿಳಿವಳಿಕೆಯೇ ಗಟ್ಟಿಯಾಗಿರುತ್ತದೆ; ಮನಃಪ್ರಾಣಕರಣಾದಿಗಳೇ ತಾವೆಂಬ ಅಭಿಮಾನವೂ ಇರುತ್ತದೆ. ಆದ್ದರಿಂದ ಅವುಗಳು ಬೆಳೆದುಕೊಂಡರೆ ತಾವೇ ಬೆಳೆದು ಕೊಂಡೆವೆಂದೂ ಅವುಗಳು ಕೃಶವಾದರೆ ತಾವೇ ಕೃಶರಾದೆವೆಂದೂ ತಿಳಿಯುತ್ತಾರೆ. ಹೀಗೆ ತಿಳಿದುಕೊಂಡಿರುವವರು ಆಯಾ ಕರ್ಮಗಳನ್ನು ಮಾಡಿ ಆಯಾ ಫಲಗಳನ್ನು ಅನುಭವಿಸುವದಕ್ಕಾಗಿ ಮತ್ತೆ ಮತ್ತೆ ಸತ್ತು ಆಯಾ ಕರ್ಮಭೋಗಕ್ಕೆ ತಕ್ಕ ಜನ್ಮಗಳನ್ನು ಪಡೆಯುತ್ತಿರುವರು. ಆದ್ದರಿಂದ ಹೊರನೋಟವೇ ಮರಣಕ್ಕೆ ಹೇತು. ಈ ನೋಟವುಳ್ಳವರೇ ಮರ್ತ್ಯರು.

ಆದರೆ ಯಾರು ಇದೆಲ್ಲವೂ ಅಕ್ಷರರೂಪವಾದ ಪರಮಾತ್ಮನಲ್ಲಿಯೇ ಹೆಣೆದುಕೊಂಡಿರುತ್ತದೆಯೆಂಬುದನ್ನು ಮನಗಂಡಿರುವರೋ ಅವರು ಅಮೃತರು, ಸಾವಿಲ್ಲದವರು. ಸಾವೆಂಬುದು ಶರೀರಾದಿಗಳ ನಾಶದಿಂದ ಆಗತಕ್ಕದ್ದು; ಆದರೆ ಈ ಜ್ಞಾನಿಗಳ ದೃಷ್ಟಿಯಲ್ಲಿ ಆತ್ಮನಿಗಿಂತ ಬೇರೆಯಾಗಿ ಶರೀರಾದಿಗಳು ಇರುವದೇ ಇಲ್ಲ, ಎಲ್ಲವೂ ಅಕ್ಷರವೇ, ನಾಶರಹಿತವಾದದ್ದೇ.

ಆದ್ದರಿಂದ ಅಕ್ಷರರೂಪನಾದ ಪರಮಾತ್ಮನ ಕಡೆಗೇ ಮನಸ್ಸನ್ನು ತಿರುಗಿಸಬೇಕು. ಆ ಆತ್ಮನ ಅರಿವನ್ನೇ ಮಾಡಿಕೊಳ್ಳಬೇಕು. ಮಿಕ್ಕದ್ದೆಲ್ಲವೂ ತುಚ್ಛವಾದದ್ದು, ತನ್ನನ್ನು ನಂಬಿದವರಿಗೆ ಮರಣವನ್ನು ಕೊಡುವಂಥದ್ದು. ಈ ಸಂಸಾರವೆಂಬುದೊಂದು ಜನನಮರಣಗಳ ಮಹಾಸಾಗರವಾಗಿರುತ್ತದೆ. ಈ ಸಾಗರವನ್ನು ದಾಟುವದು ಮರ್ತ್ಯರಿಗೆ ಅತ್ಯಂತಕಷ್ಟವಾಗಿರುತ್ತದೆ. ಆದ್ದರಿಂದ ವಿವೇಕಿಯಾದವನು ಬಾಹ್ಯಜಗತ್ತಿನ ವಿಷಯಕವಾದ ಮಾತುಗಳೆಲ್ಲವನ್ನೂ ಬಿಟ್ಟುಬಿಡಬೇಕು. ಆತ್ಮನೊಬ್ಬನನ್ನೇ ತಿಳಿದುಕೊಳ್ಳಬೇಕು. ಆ ತಿಳಿವಳಿಕೆಯೇ ಸಂಸಾರಸಾಗರವನ್ನು ದಾಟುವ ಸೇತುವೆಯಾಗಿರುತ್ತದೆ. ಹೇಗೆ ನದಿಯ

ಮೇಲಿರುವ ಸೇತುವೆಯ ಸಹಾಯದಿಂದ ನಾವು ಈ ಕಡೆಯಿಂದ ಆ ಕಡೆಗೆ ಸುಲಭವಾಗಿ ದಾಟಿಹೋಗಬಹುದೋ ಹಾಗೆಯೇ ಸಂಸಾರಸಾಗರವನ್ನು ದಾಟುವದಕ್ಕೆ ಆತ್ಮಜ್ಞಾನವೊಂದೇ ಸೇತುವಾಗಿರುತ್ತದೆ.

ಈ ಅಕ್ಷರನೆಂಬ ಪರಮಾತ್ಮನನ್ನು ಕಾಣುವದು ಹೇಗೆ?–ಎಂದರೆ ನಮ್ಮ ನಮ್ಮ ಹೃದಯದಲ್ಲಿಯೇ ಕಾಣಬೇಕು. ಹೃದಯಕ್ಕೆ ಶರೀರದ ಎಲ್ಲಾ ಕಡೆಗಳಿಂದಲೂ ನಾಡಿಗಳು ಬಂದು ಗಾಡಿಯ ಗುಂಬಕ್ಕೆ ಹಾರೆಕೋಲುಗಳು ಸಿಕ್ಕಿಕೊಂಡಿರುವಂತೆ ಸೇರಿಕೊಂಡಿರುತ್ತವೆ. ಈ ಹೃದಯದಲ್ಲಿಯೇ ನಮ್ಮ ಆತ್ಮನನ್ನು ಕಾಣಬೇಕು. ಹೃದಯವೆಂಬುದು ಅಂತಃಕರಣದ ಸ್ಥಾನವು. ಹೃದಯದಲ್ಲಿ ಕಾಮ, ಕ್ರೋಧ, ಹರ್ಷ–ಮುಂತಾದ ವೃತ್ತಿಗಳು ಎದ್ದುಕೊಂಡಂತೆ ನಮ್ಮ ಆತ್ಮನೂ ಆಯಾ ವೃತ್ತಿಗಳೊಡನೆ ತಾದಾತ್ಮ್ಯವನ್ನು ಹೊಂದಿ 'ಈಗ ನನಗೆ ಆಸೆಯಾಗಿದೆ', 'ಈಗ ಸಿಟ್ಟಾಗಿರುತ್ತೇನೆ', 'ಈಗ ಹೃಷ್ಟನಾಗಿರುತ್ತೇನೆ'–ಎಂದು ಮುಂತಾದ ಭಾವನೆಗಳಿಗೆ ಅವಕಾಶವನ್ನು ಕೊಡುತ್ತಿರುತ್ತಾನೆ. ಈ ನೋಡುವ, ಕೇಳುವ, ಯೋಚಿಸುವ, ಅನುಭವಕ್ಕೆ ಹೊಂದಿಸಿ ನೋಡುತ್ತಿರುವ, ಆತ್ಮಸ್ವರೂಪವು ನಮ್ಮ ನಮ್ಮ ಅಂತಃಕರಣಕ್ಕೆ ಕಟ್ಟುಬಿದ್ದಿರುವಂತೆ ತೋರುತ್ತಿದ್ದರೂ ನಿಜವಾಗಿ ಈ ಆತ್ಮನು ಯಾವ ದೇಶಕಾಲವಸ್ತುಕೃತ ವಾದ ಅಳತೆಯೂ ಇಲ್ಲದೆ ಅನಂತವಾಗಿರುವ ಚಿನ್ಮಾತ್ರನಾಗಿರುತ್ತಾನೆಂಬುದು ಚೆನ್ನಾಗಿ ವಿಚಾರಮಾಡಿದವರಿಗೆ ಗೊತ್ತಾಗುತ್ತದೆ. ಈ ಆತ್ಮನನ್ನೇ ಓಂಕಾರದ ಮೂಲಕವಾಗಿ ಚಿಂತಿಸ ಬೇಕು. ಓಂಕಾರವು ಈ ಇಡಿಯ ಜಗತ್ತೂ, ಇದರ ಬೀಜವೂ ಆಗಿರುತ್ತದೆ. ವಾಚ್ಯವಾಚಕ ಗಳನ್ನು ಮೀರಿರುವ ಅಕ್ಷರರೂಪನಾದ ಪರಮಾತ್ಮನೇ ನಿಜವಾದ ಓಂಕಾರವು. ಈ ತಿಳಿವಳಿಕೆಯನ್ನು ತಂದುಕೊಂಡವರಿಗೆ ತಮ್ಮ ಆತ್ಮನು ಪರಿಚ್ಛಿನ್ನನಾಗಿ ಕಾಣುವದಿಲ್ಲ; ಅವನೇ ಸರ್ವವು, ಅವನಲ್ಲಿಯೇ ಎಲ್ಲವೂ ಸೇರಿಕೊಂಡು ಅವನ ರೂಪದಿಂದಲೇ ಇದ್ದುಕೊಂಡಿದೆ–ಎಂಬ ತತ್ತ್ವವು ಮನದಟ್ಟಾಗಿಬಿಟ್ಟಿರುತ್ತದೆ.

ಈ ಜ್ಞಾನವು ಬಂದಮೇಲೆ ಆಗುವ ಫಲವು ಹಾಗಿರಲಿ. ಇದನ್ನು ಅರಿತುಕೊಳ್ಳ ಬೇಕೆಂದು ಅನನ್ಯಭಾವದಿಂದ ಮನಸ್ಸುಮಾಡಿದರೂ ಸಾಕು, ಅಂಥ ಜಿಜ್ಞಾಸುಗಳಿಗೂ ಸ್ವಸ್ತಿಯಾಗುವದು. ಅಜ್ಞಾನದ ಕತ್ತಲೆಯ ಆಚೆಗಿರುವ ಸ್ವಯಂಪ್ರಕಾಶನಾದ ಆತ್ಮನ ಸ್ವರೂಪವನ್ನು ಕಂಡುಕೊಳ್ಳಬೇಕೆಂದು ಹೊರಟವರೇ ಧನ್ಯರು, ಅವರಿಗೆ ಎಂದಿಗೂ ದುರ್ಗತಿಯಾಗುವದಿಲ್ಲ, ಅವರ ದಾರಿಯಲ್ಲಿ ಯಾವ ಎಡರುಗಳೂ ಕಾಣಿಸಿಕೊಳ್ಳುವದಿಲ್ಲ. ಸದ್ಗುರುವನ್ನು ಸೇವಿಸಿ ಆತನು ಉಪದೇಶಮಾಡಿದ ರೀತಿಯಿಂದ ಹೃದಯದಲ್ಲಿರುವ ಪರಮಾತ್ಮನನ್ನು ಓಂಕಾರದ ಮೂಲಕವಾಗಿ ಧ್ಯಾನಮಾಡುವದಕ್ಕೆ ಮೊದಲುಮಾಡುವ ಮುಮುಕ್ಷುಗಳಿಗೆ ಆ ಸದ್ಗುರುವೇ ಆಶೀರ್ವಾದಮಾಡಿ ಸರಿಯಾದ ದಾರಿಯನ್ನು ತೋರಿಸಿಕೊಡುತ್ತಾನೆ. ಅನಾದಿಯಾಗಿ ಗುರುಶಿಷ್ಯಪರಂಪರೆಯಿಂದ ಹೀಗೆಯೇ ಮೋಕ್ಷಮಾರ್ಗದಲ್ಲಿ ವಿವೇಕಿಗಳು ನಡೆಯುತ್ತಾಬಂದಿರುತ್ತಾರೆ.



# 14. ಹೃದಯದಲ್ಲಿರುವ ಪರಮಾತ್ಮ

ಯಃ ಸರ್ವಜ್ಞಃ ಸರ್ವವಿದ್ ಯಸ್ಯೈಷ ಮಹಿಮಾ ಭುವಿ ।
ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಪ್ರತಿಷ್ಠಿತಃ ॥7॥

ಮನೋಮಯಃ ಪ್ರಾಣಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ।
ತದ್ವಿಜ್ಞಾನೇನ ಪರಿಪಶ್ಯನ್ತಿ ಧೀರಾ ಆನನ್ದರೂಪಮಮೃತಂ ಯದ್ವಿಭಾತಿ ॥8॥

*"ಯಾವನು ಸರ್ವಜ್ಞನೋ ಸರ್ವವೇತ್ತನೋ, ಯಾವನ ಮಹಿಮೆಯೇ ಈ ಭೂಮಂಡಲದಲ್ಲಿ ತೋರುತ್ತಿದೆಯೋ, ಆ ಈ ಆತ್ಮನು ದಿವ್ಯವಾದ ಬ್ರಹ್ಮಪುರದಲ್ಲಿರುವ ಆಕಾಶದಲ್ಲಿ ನೆಲಸಿರುತ್ತಾನೆ. ಅವನು ಮನೋಮಯನು, ಪ್ರಾಣಶರೀರಗಳನ್ನು ತೆಗೆದುಕೊಂಡು ಹೋಗುತ್ತಿರುವನು. ಈ ಅನ್ನಮಯವಾದ ಶರೀರದಲ್ಲಿ ಹೃದಯವನ್ನಿಟ್ಟುಕೊಂಡಿರುತ್ತಾನೆ. ಪಂಡಿತರಾದವರು ಆತನ ವಿಜ್ಞಾನದಿಂದ ಆನಂದರೂಪವೂ ಅಮೃತವೂ ಆಗಿ ತಮ್ಮಲ್ಲಿ ಹೊಳೆಯುತ್ತಿರುವ ತತ್ತ್ವವನ್ನು ಕಂಡುಕೊಳ್ಳುವರು."*

ಪರಮಾತ್ಮನು ಎಲ್ಲೆಲ್ಲಿಯೂ ವ್ಯಾಪಿಸಿರುತ್ತಾನಾದರೂ ಆತನನ್ನು ಮುಖ್ಯವಾಗಿ ಹೃದಯದಲ್ಲಿಯೇ ಕಂಡುಕೊಳ್ಳಬೇಕೆಂದು ಮತ್ತೆಮತ್ತೆ ಹೇಳುತ್ತಲೇ ಬಂದದ್ದಾಗಿದೆ. ಈ ಪರಮಾತ್ಮನು ಹೃದಯದಲ್ಲಿರುವನೆಂಬುದರಿಂದ ಇವನ ಸ್ವರೂಪವು ಅಷ್ಟು ಸಂಕುಚಿತವಾದದ್ದೆಂದು ಮಾತ್ರ ಎಂದಿಗೂ ಭಾವಿಸಬಾರದು. ಲೋಕದಲ್ಲಿರುವದನ್ನೆಲ್ಲ ಈತನ ಜ್ಞಾನದ ಬೆಳಕೇ ಬೆಳಗುತ್ತಿರುತ್ತದೆ; ಒಂದೊಂದು ವಸ್ತುವನ್ನು ವಿಶೇಷವಾಗಿ ಅರಿಯುವದಕ್ಕೂ ಈತನ ಜ್ಞಾನದ ಬೆಳಕಿನ ಸಹಾಯವೇ ಬೇಕಾಗುತ್ತದೆ. ಹೊರಗೆ ಕಾಣುವ ಪೃಥಿವ್ಯಂತರಿಕ್ಷಗಳು ತಮ್ಮತಮ್ಮ ಸ್ಥಾನದಲ್ಲಿರುವದಕ್ಕೂ ಸೂರ್ಯಚಂದ್ರರು ಜಗತ್ತಿಗೆಲ್ಲ ಬೆಳಕನ್ನು ಕೊಡುತ್ತಾ ಸಂಚರಿಸುತ್ತಿರುವದಕ್ಕೂ ನದಿಗಳು ಗೊತ್ತಾಗಿ ಹರಿಯುವದಕ್ಕೂ ಸಾಗರವು ಮೇರೆತಪ್ಪದಿರುವದಕ್ಕೂ ಸ್ಥಾವರಜಂಗಮಪ್ರಾಣಿಗಳು ತಮ್ಮತಮ್ಮಸ್ವಭಾವಕ್ಕೆ ಕಟ್ಟುಬಿದ್ದಿರುವದಕ್ಕೂ ಋತುಗಳೂ, ಅಯನಗಳೂ, ಸಂವತ್ಸರಗಳೂ ತಮ್ಮತಮ್ಮ ಧರ್ಮವನ್ನು ತಪ್ಪದೆ ತೋರಿಸುತ್ತಿರುವದಕ್ಕೂ ಜೀವರ ಕ್ರಿಯಾಕರ್ಮಫಲಗಳು ನಿಯತವಾಗಿ ಸಂಬದ್ಧವಾಗಿರುವದಕ್ಕೂ ಆತನ ಮಹಿಮೆಯೇ ಕಾರಣವು.

ಇಂಥ ಪರಬ್ರಹ್ಮಸ್ವರೂಪನಾದ ಈ ಆತ್ಮನು ದಿವ್ಯವಾದ ಬ್ರಹ್ಮಪುರರೂಪವಾದ ಈ ಹೃದಯದಲ್ಲಿರುತ್ತಿರುವನು. ಸಾಮ್ರಾಜ್ಯವನ್ನೆಲ್ಲ ಆಳುತ್ತಿರುವ ಚಕ್ರವರ್ತಿಯು ತನ್ನ ರಾಜಧಾನಿಯಲ್ಲಿ ಒಂದು ಅರಮನೆಯನ್ನು ಕಟ್ಟಿಸಿಕೊಂಡು ವಾಸಮಾಡುವಂತೆ ಈ ಪರಮಾತ್ಮನು ಹೃದಯವೆಂಬ ಬ್ರಹ್ಮದುರ್ಗದಲ್ಲಿರುವ ಆಕಾಶದಲ್ಲಿ ನೆಲಸಿರುತ್ತಾನೆ. ಈ ದುರ್ಗವು ದಿವ್ಯವಾದದ್ದು, ಇಲ್ಲಿ ಅಂತಃಕರಣದ ನೂರಾರು ಪ್ರತ್ಯಯಗಳ ಬೆಳಕುಗಳು

ಜ್ವಲಿಸುತ್ತಿರುವವು. ಸರ್ವಗತನಾದ ಪರಮಾತ್ಮನು ಎಲ್ಲಿಗೂ ಹೋಗುವದಾಗಲಿ ಎಲ್ಲಿಂದಲಾದರೂ ಬರುವದಾಗಲಿ ಎಲ್ಲಿಯಾದರೂ ನೆಲಸಿರುವದಾಗಲಿ ನಿಜವಾಗಿ ಹೊಂದಲಾರದಾದರೂ ಈ ಹೃದಯದಲ್ಲಿರುವ ಅಂತಃಕರಣಕ್ಕೆ ಸಾಕ್ಷಿಯಾಗಿ ಚೈತನ್ಯರೂಪದಿಂದ ಬೆಳಗುತ್ತಿರುವದು ಪರಿಶೀಲಿಸಿದವರಿಗೆಲ್ಲ ಅನುಭವಕ್ಕೆ ಬರುವಂತಿರುವದರಿಂದ "ಈ ಬ್ರಹ್ಮಪುರದಲ್ಲಿ ನೆಲಸಿರುತ್ತಾನೆ" ಎಂದು ಹೇಳಿರುತ್ತದೆ.

ಈ ಆತ್ಮನು ಮನಸ್ಸಿನ ಬಗೆಬಗೆಯ ವೃತ್ತಿಗಳಿಂದಲೇ ನಮಗೆ ಮೊದಲು ಗೋಚರನಾಗುವನಾದ್ದರಿಂದ ಇವನನ್ನು ಮನೋಮಯನೆಂದು ಕರೆದಿದೆ. ಮನಸ್ಸೆಂಬ ಉಪಾಧಿಯಿಂದಲೇ ನಾವು ಈ ಆತ್ಮನನ್ನು ಕಂಡುಕೊಳ್ಳಬೇಕಾಗಿದೆ. ಶರೀರದಲ್ಲಿ ಪ್ರಾಣವನ್ನೂ ಸೂಕ್ಷ್ಮಶರೀರವನ್ನೂ ಒಂದು ಸ್ಥೂಲಶರೀರದಿಂದ ಮತ್ತೊಂದಕ್ಕೆ ಅವರವರ ಕರ್ಮಕ್ಕನುಗುಣವಾಗಿ ಕಳುಹಿಸುತ್ತಿರುವ ಸ್ವಾಮಿಯೂ ಇವನೇ. ಹೃದಯವು ಶರೀರದಲ್ಲಿರುತ್ತದೆ, ಶರೀರವು ಅನ್ನದಿಂದ ಬೆಳೆದುಕೊಂಡು ನಿಂತಿರುತ್ತದೆ. ಆದ್ದರಿಂದ ಅನ್ನಮಯವಾದ ಶರೀರದೊಳಗೆ ಆತ್ಮನು ನೆಲಸಿರುತ್ತಾನೆ–ಎಂಬುದು ಗಡಿಗೆಯೊಳಗೆ ಆಕಾಶವಿದೆ ಎಂಬ ಮಾತಿನಂತೆ. ಪರಮಾರ್ಥವಾಗಿ ನೋಡಿದರೆ ಆಕಾಶದಲ್ಲಿಯೇ ಗಡಿಗೆಯಿರುತ್ತದೆ, ಗಡಿಗೆಯೆಂಬುದೂ ಆಕಾಶದ ರೂಪವಿಶೇಷವೇ ಆಗಿರುತ್ತದೆ. ಅದರಂತೆ ಶರೀರವೂ, ಮನಸ್ಸೂ ಪ್ರಾಣವೂ ಎಲ್ಲವೂ ಆತ್ಮನಿಂದಲೇ ಉಂಟಾಗಿರುತ್ತದೆ. ಆದ್ದರಿಂದ ನಮ್ಮ ವ್ಯಾವಹಾರಿಕದೃಷ್ಟಿಯನ್ನೂ ಅನುಸರಿಸಿಯೇ ಶ್ರುತಿಯಲ್ಲಿ ಪರಮಾತ್ಮನು ಅನ್ನಮಯವಾದ ಶರೀರದಲ್ಲಿ ನೆಲಸಿರುತ್ತಾನೆ– ಎಂದು ಹೇಳಿದೆಯೆಂದು ತಿಳಿಯಬೇಕು.

ಈ ಹೃದಯದುರ್ಗದಲ್ಲಿರುವ ಪರಮಾತ್ಮನನ್ನು ಇದ್ದದ್ದು ಇದ್ದಹಾಗೆ ಅರಿಯುವದಕ್ಕೆ ಎಲ್ಲರಿಗೂ ಸಾಧ್ಯವಿಲ್ಲ. ಯಾರು ವಿವೇಕಿಗಳೋ ಯಾರು ಶಮ, ದಮ, ಧ್ಯಾನ, ಸರ್ವತ್ಯಾಗ, ವೈರಾಗ್ಯ–ಮುಂತಾದ ಸಾಧನಗಳಿಂದ ಮನಸ್ಸನ್ನು ಸಂಸ್ಕಾರಗೊಳಿಸಿಕೊಂಡು ಶಾಸ್ತ್ರ, ಸದ್ಗುರು– ಇವರ ಉಪದೇಶದಿಂದುಂಟಾಗುವ ಒಂದಾನೊಂದು ವಿಶೇಷರೂಪವಾದ ಜ್ಞಾನವನ್ನು ಸಂಪಾದಿಸಿಕೊಳ್ಳುವರೋ ಅವರಿಗೆ ಮಾತ್ರ ಈ ಆತ್ಮನ ನಿಜವಾದ ಸ್ವರೂಪವು ಮನದಟ್ಟಾಗುವದು.

ಈ ಆತ್ಮನು ನಮಗೆ ನಾನಾದುಃಖಗಳಿಂದೊಡಗೂಡಿದವನಾಗಿ ಕಾಣುತ್ತಿರುವನಷ್ಟೆ. ನಾವು ಹೇಳಿದ ಸಾಧನಗಳನ್ನು ಮಾಡಿದವರ ಮನಸ್ಸಿಗೆ ಇದೇ ಆತ್ಮನೇ ಮಿಗಿಲಿಲ್ಲದ ಆನಂದಸ್ವರೂಪನಾಗಿ ತೋರುತ್ತಾನೆ. ಈ ಆತ್ಮನು ಸಾವಿನಮೇಲೆ ಸಾವನ್ನು ಹೊಂದುವ ಸ್ವಭಾವದವನೆಂದೂ ಗಳಿಗೆಗೊಂದು ರೂಪವನ್ನು ಹೊಂದುತ್ತಿರುವದರಿಂದ ಇವನಿಗೆ ಒಂದು ಗೊತ್ತಾದ ರೂಪವಿಲ್ಲವೆಂದೂ ನಮಗೆ ಈಗ ತೋರುತ್ತಿರುವದಷ್ಟೆ. ಇದೇ ಆತ್ಮನೇ ವಿವೇಕಿಗಳ, ಮನಸ್ಸಿಗೆ ಯಾವ ಮರಣವೂ ಇಲ್ಲದ ಶುದ್ಧಚೈತನ್ಯಸ್ವರೂಪದ ಆತ್ಮನು ಎಂದು ಮನವರಿಕೆಯಾಗುತ್ತದೆ.



## 15. ಪರಮಾತ್ಮಜ್ಞಾನದ ಫಲ

**ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ।**
**ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥9॥**

*"ಆ ಪರಾವರನನ್ನು ಕಂಡುಕೊಂಡರೆ ಹೃದಯದ ಗಂಟು ಬಿಚ್ಚಿಕೊಳ್ಳುವದು, ಎಲ್ಲಾ ಸಂಶಯಗಳೂ ಕತ್ತರಿಸಿಹೋಗುವವು, ಈ ಸಾಧಕನ ಕರ್ಮಗಳೂ ಸವೆದುಹೋಗುವವು."*

ಹೀಗೆ ಹೃದಯದಲ್ಲಿರುವ ಸರ್ವಸಾಕ್ಷಿಯಾದ ನಮ್ಮ ಆತ್ಮನೇ ಸರ್ವರ ಆತ್ಮನು. ಯಾವ ಸಂಸಾರದ ಧರ್ಮವೂ ಇಲ್ಲದ ಆ ಪರಮಾತ್ಮನೇ ಕಾರಣರೂಪದಿಂದಲೂ ಕಾರ್ಯರೂಪದಿಂದಲೂ ತೋರುತ್ತಿರುವ ಪರಾವರರೂಪನು ಎಂದು ಸಾಧನಗಳಿಂದ ಮನಗಂಡರೆ ಆಗುವ ಫಲವೇನು? – ಎಂಬುದನ್ನು ಇಲ್ಲಿ ವರ್ಣಿಸಿದೆ.

ಮನುಷ್ಯನ ಹೃದಯದಲ್ಲಿ ಒಂದು ಅನಾದಿಯಾದ ಕಗ್ಗಂಟು ಬಿದ್ದುಕೊಂಡಿರುತ್ತದೆ. ಆತ್ಮನೆಂದರೆ ಯಾವದು, ಅನಾತ್ಮವೆಂದರೆ ಯಾವದು? – ಎಂದು ಬಿಡಿಸಿಕೊಳ್ಳಲಾರದೆ ಆತ್ಮನಲ್ಲಿ ಅನಾತ್ಮಸ್ವಭಾವವನ್ನೂ ಅನಾತ್ಮದಲ್ಲಿ ಆತ್ಮಸ್ವಭಾವವನ್ನೂ ಹುಟ್ಟುಗಟ್ಟಿಕೊಂಡು ದಿಟವಾದ ಆತ್ಮಸ್ವರೂಪವನ್ನೂ ಸಟೆಯಾದ ಅನಾತ್ಮವನ್ನೂ ಸೇರಿಸಿ ಒಂದೇ ತತ್ತ್ವವೆಂದು ತಿಳಿಯುತ್ತಿರುವದೇ ಈ ಕಗ್ಗಂಟು. ಈ ಕಗ್ಗಂಟಿನ ಫಲವಾಗಿ 'ನಾನು ಅಲ್ಪಜ್ಞನು, ಅತೃಪ್ತನು, ಅಶಕ್ತನು' – ಎಂದುಕೊಂಡು ಪ್ರತಿಯೊಬ್ಬರೂ ತನಗಿಂತ ಹೊರಗಿರುವ ವಸ್ತುವಿನಿಂದ ತನಗೆ ಯಾವದೋ ಪ್ರಯೋಜನವಾಗಬೇಕೆಂದು ತಿಳಿಯುತ್ತಿರುವನು. ಇಲ್ಲದಿರುವ ಎರಡನೆಯ ವಸ್ತುವನ್ನು ಹುಟ್ಟುಹಾಕಿಕೊಂಡು ಅದರಿಂದ ತನಗೆ ಏನೋ ಒಂದು ಪ್ರಯೋಜನವು ಆಗಬೇಕೆಂದೂ ಇಂಥದ್ದನ್ನು ದೊರಕಿಸಿಕೊಂಡು ಇಂಥದ್ದನ್ನು ತೊಲಗಿಸಿಕೊಂಡು ತಾನು ಕೃತಕೃತ್ಯನಾಗಿ ತೃಪ್ತನಾಗಬೇಕೆಂದೂ ಹವಣಿಸುತ್ತಿರುವದು ನಮ್ಮಲ್ಲಿ ಪ್ರತಿಯೊಬ್ಬನ ಮನಸ್ಸಿನಲ್ಲಿಯೂ ಬೇರೂರಿಕೊಂಡಿರುವ ವಾಸನೆ. ಆ ಅವಿದ್ಯಾವಾಸನೆಯು ರಾಗದ್ವೇಷಗಳ, ಮತ್ತು ಅವುಗಳಿಂದಾಗುವ ಸುಖದುಃಖಗಳ, ಹಂಗಿನಲ್ಲಿ ನಮ್ಮನ್ನು ಇರಿಸಿರುವದು; ಇದೇ ಹೃದಯದ ಗಂಟು. ಈ ಕಗ್ಗಂಟನ್ನು ಬಿಚ್ಚಿಕೊಂಡು ಆತ್ಮನು ನಿತ್ಯಶುದ್ಧಬುದ್ಧಮುಕ್ತಸ್ವಭಾವನೆಂದೂ ತನಗೆರಡನೆಯದಿಲ್ಲದ ಕೇವಲಸ್ವರೂಪನೆಂದೂ ಅರಿತು ಪರಮತೃಪ್ತಿಯನ್ನು ಹೊಂದುವದೆಂಬುದು ಆತ್ಮಜ್ಞಾನದ ಒಂದು ಪ್ರಯೋಜನವು.

ಹೃದಯದ ಕಗ್ಗಂಟು ಬಿಚ್ಚಿಕೊಳ್ಳುವದಕ್ಕೆ ಮುಂಚೆಯೇ ಮತ್ತೊಂದು ಪ್ರಯೋಜನವು ಉಂಟಾಗಿಬಿಟ್ಟಿರುತ್ತದೆ. ಅದೇನೆಂದರೆ ಈ ಶರೀರಾದಿಗಳಿಗಿಂತ

ಬೇರೆಯಾಗಿ ನಮ್ಮ ಸ್ವರೂಪವೊಂದು ಇದೆಯೊ, ಇಲ್ಲವೊ? ಇದ್ದರೆ ಅದಕ್ಕೂ ಈ ಶರೀರಾದಿಗಳಿಗೂ ಸಂಬಂಧವೇನು? ಈ ಶರೀರಗಳ ಹೆಚ್ಚುಕುಂದುಗಳಿಂದ ನಮಗೆ ಸುಖದುಃಖಗಳುಂಟಾಗುತ್ತಿರುವದಕ್ಕೆ ಕಾರಣವೇನು? ಈ ಶರೀರಾದಿಗಳು ನಮಗೆ ಬರುವದಕ್ಕಿಂತ ಮುಂಚೆ ನಾವು ಇದ್ದೆವೊ, ಇಲ್ಲವೊ? ಇದ್ದರೆ ಯಾವ ರೂಪದಲ್ಲಿದ್ದೆವು? ಆ ರೂಪವನ್ನು ಬಿಟ್ಟು ಇಲ್ಲಿಗೆ ಬಂದದ್ದೇಕೆ? ಈ ಶರೀರಗಳಲ್ಲಿ ನಮಗೆ ಇರುವ ಮಿತಿಮೀರಿದ ಅಭಿಮಾನಕ್ಕೇನು ಕಾರಣ? ನಮ್ಮಂತೆಯೇ ಹಲವರು ಶರೀರಿಗಳು ಕಣ್ಣಿಗೆ ಕಾಣಿಸುತ್ತಿರುವರಲ್ಲ, ಅವರಿಗೂ ನಮಗೂ ಏನು ಸಂಬಂಧ? ಅವರಲ್ಲಿ ಕೆಲವರು ನಮ್ಮ ಗೆಳೆಯರೆಂದೂ ಮತ್ತೆ ಕೆಲವರು ಹಗೆಗಳೆಂದೂ ಇನ್ನೂ ಕೆಲವರು ಉದಾಸೀನರೆಂದೂ ಕೆಲವರು ನಮಗೂ ನಮ್ಮವರಿಗೂ ನಡುವಣ ಸಂಬಂಧದವರೆಂದೂ ಹೀಗೆಲ್ಲ ತೋರುತ್ತಿರುವದಕ್ಕೆ ಕಾರಣವೇನು? ಈ ಶರೀರಾದಿಗಳನ್ನು ಬಿಟ್ಟಬಳಿಕ ನಾವು ಏಕೆ, ಎಲ್ಲಿಗೆ, ಹೇಗೆ ಹೋಗುವೆವು? ನಮಗೆ ಆಗಬೇಕಾಗಿರುವ ಪರಮಪುರುಷಾರ್ಥವು ಯಾವದು? – ಎಂದು ಹಲವು ಬಗೆಯ ಸಂಶಯಗಳು ನಮ್ಮ ಬುದ್ಧಿಯನ್ನು ಪೀಡಿಸುತ್ತಿರುವವಷ್ಟೆ. ಪರಮಾರ್ಥವಾದ ಆತ್ಮಜ್ಞಾನವಾದಾಗ ಈ ಬಗೆಯ ಸಂಶಯಗಳೆಲ್ಲನೀಗಿ ಮನಸ್ಸಿಗೆ ಪರಮಶಾಂತಿಯಾಗಿಬಿಟ್ಟಿರುತ್ತದೆ. ಇದು ಜ್ಞಾನದ ಮತ್ತೊಂದು ಪ್ರಯೋಜನವು.

ಇವೆರಡರ ಜೊತೆಗೆ ನಾವು ಕರ್ತೃಭೋಕ್ತೃಸ್ವರೂಪರೆಂದು ಇಟ್ಟುಕೊಂಡಿರುವ ತಪ್ಪುತಿಳಿವಳಿಕೆಯ ಫಲವಾಗಿ ಸತತವಾಗಿ ದುಡಿಯುತ್ತಿರುವ ಗಾಣದ ಎತ್ತುಗಳಂತೆ ಸಂಸಾರದಲ್ಲಿ ತೊಳಲುತ್ತಿರುವ ಆಯಾಸದ ಕರ್ಮವು ಮುಗಿದುಹೋಗುವದು ಮತ್ತೂ ಒಂದು ಪ್ರಯೋಜನವು. ಯಾವದೊಂದು ಕರ್ಮವನ್ನು ಮಾಡಿದರೂ ಆ ಕರ್ಮದ ಫಲವನ್ನು ದೊರಕಿಸಿಕೊಂಡು ಭೋಗಿಸುವದೇ ನಮಗೆ ಗುರಿಯಾಗಿರುವದಷ್ಟೆ. ಆ ಫಲವು ದೊರಕಿದಮೇಲಾದರೂ ಅದರ ಹವಣಿಕೆಯು ನಮಗೆ ನಿಂತುಹೋಗುವದಿಲ್ಲ. ಏಕೆಂದರೆ ಆ ಫಲವು ಕೃತಕವಾಗಿರುವದರಿಂದ ನಮ್ಮ ಕರ್ಮದ ಯೋಗ್ಯತೆಗೆ ತಕ್ಕಂತೆ ಸ್ವಲ್ಪಕಾಲದವರೆಗೆ ಮಾತ್ರವೇ ನಮ್ಮಲ್ಲಿದ್ದು ಬಳಿಕ ಕಣ್ಮರೆಯಾಗಿಬಿಡುತ್ತದೆ. ಆದರೆ ಅದನ್ನು ಭೋಗಿಸಿದ್ದರಿಂದಾದ ವಾಸನೆಯು ಮಾತ್ರ ನಮ್ಮ ಹೃದಯಗ್ರಂಥಿಯಲ್ಲಿದ್ದುಕೊಂಡೇ ಇರುತ್ತದೆ. ಈ ವಾಸನೆಯು ಬೇರೆ ಯಾವದಾದರೊಂದು ಹೊರಗಿನ ನಿಮಿತ್ತದಿಂದ ಎದ್ದುಕೊಂಡರೆ ಮತ್ತೆ ಎಂದಿನಂತೆ ಅದೇ ಫಲದ ಕಾಮವೂ ಆ ಕಾಮದ ಪ್ರೇರಣೆಯಿಂದ ಕರ್ಮವೂ ಉಂಟಾಗಿಯೇತೀರುತ್ತವೆ. ಹೀಗೆ ವಾಸನೆಗಳು ರಾಶಿರಾಶಿಯಾಗಿ ನಮ್ಮ ಅಂತಃಕರಣದಲ್ಲಿದ್ದುಕೊಂಡಿರುವವು. ಅದಕ್ಕೆ ಸಂಚಿತಕರ್ಮವೆಂದು ಹೆಸರು. ಈ ಕರ್ಮವು ರೂಪಗೊಂಡು ನಾವು ಮಾಡಲಿರುವ ಕರ್ಮವೂ ಅಳತೆಯಿಲ್ಲದಷ್ಟು ಇರುತ್ತದೆ. ಅದಕ್ಕೆ ಆಗಾಮಿಕರ್ಮವೆಂದು ಹೆಸರು. ಸಂಚಿತಕರ್ಮದಲ್ಲಿ ಒಂದು ಭಾಗದ ಫಲವಾಗಿ

ಈಗಿನ ಶರೀರವೇ ಮುಂತಾದವುಗಳು ಕಾಣಿಸಿಕೊಂಡಿರುತ್ತವೆಯಷ್ಟೆ. ಅಷ್ಟುಭಾಗಕ್ಕೆ ಪ್ರಾರಬ್ಧಕರ್ಮವೆಂದು ಹೆಸರು. ಜ್ಞಾನಿಯಾದವನಿಗೆ ಈ ಕರ್ಮರಾಶಿಯೆಲ್ಲವೂ ಸುಟ್ಟುಹೋಗಿಬಿಡುತ್ತದೆ. ಅಜ್ಞರ ದೃಷ್ಟಿಯಿಂದ ನೋಡಿದರೆ ಹಿಮವತ್ಪರ್ವತದಂತೆ ಕರ್ಮವು ಎಂದಿಗೂ ಅಲುಗಾಡದೆ ಭದ್ರವಾಗಿ ನಿಂತಿರುತ್ತದೆಯಾದರೂ ಜ್ಞಾನಿಯ ದೃಷ್ಟಿಯಿಂದ ಅದು ಸೂರ್ಯನ ರಶ್ಮಿಯಿಂದ ಮಂಜು ಕರಗುವಂತೆ ಕರಗಿಹೋಗಿಬಿಡುತ್ತದೆ. ಜ್ಞಾನವು ಕರ್ಮವನ್ನು ಹೇಗೆ ಸುಟ್ಟೀತೆಂದು ಕೆಲವರಿಗೆ ಆಶ್ಚರ್ಯವಾಗಬಹುದು. ಆದರೆ ಜ್ಞಾನದ ಸ್ವರೂಪವೇನೆಂಬುದನ್ನು ಪರಿಶೀಲಿಸಿದವರಿಗೆ ಇಲ್ಲಿ ಯಾವ ಆಶ್ಚರ್ಯಕ್ಕೂ ಎಡೆ ಇರುವದಿಲ್ಲ. ಏಕೆಂದರೆ ನಾನು ಕರ್ತೃವಲ್ಲ, ಭೋಕ್ತೃವಲ್ಲ; ಶರೀರ, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರ–ಇವುಗಳೆಲ್ಲವನ್ನೂ ದಾಟಿರುವ ಸರ್ವಸಾಕ್ಷಿಯೇ, ಸರ್ವರ ಆತ್ಮನೇ–ಎಂಬುದು ಜ್ಞಾನವು. ಈ ಜ್ಞಾನವು ಯಾವನಲ್ಲಿ ಉಂಟಾಗಿರುವದೋ, ಯಾವನು ಈ ಸಾಕ್ಷಿಚೈತನ್ಯವೇ ತನ್ನ ಆತ್ಮನೆಂಬುದನ್ನು ಕಂಡುಕೊಂಡಿರುವನೋ, ಅವನಿಗೆ ಕರ್ಮವೆಂಬುದರ ಸಂಬಂಧವು ಎಲ್ಲಿ ಬರಬೇಕು? ನನಗೆ ಹಿಂದೂ ಕರ್ಮವಿರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರುವದಿಲ್ಲ–ಎಂದೇ ಅವನ ನಿಶ್ಚಯವಾಗಿಬಿಟ್ಟಿರುತ್ತವೆ. ಕತ್ತಲೆಯಲ್ಲಿ ಕಂಬವನ್ನು ಕಂಡು ಅಜ್ಞಾನದಿಂದ ಒಬ್ಬ ಪೋಲೀಸಿನವನೆಂದು ಅಂಜಿ ಓಡಿ ಹೋಗುತ್ತಿರುವ ಕಳ್ಳನಿಗೆ ಅದು ಪೋಲೀಸಿನವನಲ್ಲ, ಕಂಬವೇ ಎಂಬ ಅರಿವಾದ ಕೂಡಲೇ ಹೇಗೆ ಅಂಜಿಕೆಯೂ ಹೋಗಿ ಓಟವೂ ನಿಂತುಹೋಗುವದೋ ಅದರಂತೆ ಜ್ಞಾನಿಯಾದವನಿಗೆ ಅಜ್ಞಾನದಿಂದಾಗಿದ್ದ ದುಷ್ಫಲಗಳು ಹೋಗುವವಲ್ಲದೆ ಇನ್ನೂ ಉಳಿದಿರುವಂತೆ ತೋರುತ್ತಿದ್ದ ಕರ್ಮಗಳೂ ಹುಸಿಯಾಗಿಬಿಡುವವು. ಈಗಿನ ಶರೀರವೇನೋ ಕರ್ಮದ ಫಲವಾಗಿ ಬಂದುಬಿಟ್ಟಿರುತ್ತದೆ; ಆದರೆ ಉಳಿದಿರುವ ಕರ್ಮಗಳು ತನ್ನವೆಂಬ ಅರಿವು ಹೋಗಿಬಿಟ್ಟಿರುವದರಿಂದಲೂ ಮುಂದೆ ಮಾಡುವ ಕರ್ಮವೆಂಬುದರಲ್ಲಿಯೂ ಅವನಿಗೆ ಯಾವ ಸಂಕಲ್ಪವಾಗಲಿ ಅಭಿಮಾನವಾಗಲಿ ಉಂಟಾಗುವಂತಿಲ್ಲವಾದ್ದರಿಂದಲೂ ಜ್ಞಾನಿಯಾದವನಿಗೆ ಕರ್ಮಗಳು ಫಲಕಾರಿಯಾಗಿ ಉಳಿದುಕೊಳ್ಳುವ ಸಂಭವವೇ ಇಲ್ಲ. ಕನಸಿನಲ್ಲಿ ನಾವು ಮಾಡಿದಂತೆ ತೋರಿದ ಕರ್ಮಗಳಿಗೆ ಎಚ್ಚರದಲ್ಲಿ ಹೇಗೆ ಫಲವಾಗುವ ಸಂಭವವಿಲ್ಲವೋ, ಆ ಕರ್ಮಗಳೂ ಹೇಗೆ ಕನಸಿನೊಡನೆಯೇ ಬಾಧಿತವಾಗಿ ಹುಸಿತೋರಿಕೆಯೆಂದಾಗಿಬಿಡುವವೋ, ಅದರಂತೆಯೇ ಜ್ಞಾನಿಗೂ ಸಂಚಿತಾಗಾಮಿಕರ್ಮಗಳು ಅಂಟದೆ ಹೋಗುವವು. ಅವನಿಗೆ ಪ್ರಾರಬ್ಧಕರ್ಮದ ಭೋಗವು ಇರುವದೆಂದು ನಮಗೆ ತೋರಿದರೂ ಅವನ ದೃಷ್ಟಿಯಿಂದ ಅವನು ಭೋಕ್ತೃವೂ ಅಲ್ಲವಾದ್ದರಿಂದ ಯಾವ ಕರ್ಮದ ಲೇಪವೂ ಅವನಿಗೆ ಇರುವದೇ ಇಲ್ಲ.



## 16. ವೇದಾಂತೋಪದೇಶದ ಸಾರ

ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ ।
ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥9॥

ನ ತತ್ರ ಸೂರ್ಯೋ ಭಾತಿ ನ ಚನ್ದ್ರತಾರಕಂ
ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ ।
ತಮೇವ ಭಾನ್ತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥10॥

ಬ್ರಹ್ಮೈವೇದಮಮೃತಂ ಪುರಸ್ತಾತ್
ಬ್ರಹ್ಮ ಪಶ್ಚಾದ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ ।
ಅಧಶ್ಚೋರ್ಧ್ವಂ ಚ ಪ್ರಸೃತಂ
ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್ ॥11॥

*"ಜ್ಯೋತಿರ್ಮಯವಾದ ಉತ್ತಮವಾದ ಕೋಶದಲ್ಲಿ ಯಾವ ಕಶ್ಮಲವೂ ಇಲ್ಲದ ನಿರವಯವವಾದ ಬ್ರಹ್ಮವಿರುವದು. ಅದು ಶುದ್ಧವಾದದ್ದು, ಬೆಳಕುಗಳಿಗೆಲ್ಲ ಬೆಳಕು, ಅದನ್ನು ಆತ್ಮವೇತ್ತರು ಬಲ್ಲರು. ಅಲ್ಲಿ ಸೂರ್ಯನು ಬೆಳಗುವದಿಲ್ಲ, ಚಂದ್ರನಕ್ಷತ್ರಗಳು ಬೆಳಗುವದಿಲ್ಲ. ಈ ಮಿಂಚುಗಳೂ ಬೆಳಗುವದಿಲ್ಲ; ಇನ್ನು ಈ ಬೆಂಕಿಯು ಬೆಳಗುವದೆಲ್ಲಿ ಬಂತು? ಬೆಳಗುತ್ತಿರುವ ಆತನನ್ನನುಸರಿಸಿಯೇ ಎಲ್ಲವೂ ಬೆಳಗುವದು, ಆತನ ಬೆಳಕಿನಿಂದಲೇ ಇದೆಲ್ಲವೂ ಬೆಳಗುತ್ತಿರುವದು. ಈ ಮುಂದಿರುವದು ಬ್ರಹ್ಮವೇ, ಹಿಂದಿರುಗುವದೂ ಬ್ರಹ್ಮವೇ. ಬಲಕ್ಕೂ ಎಡಕ್ಕೂ ಇರುವದು ಬ್ರಹ್ಮವೇ, ಕೆಳಗೂ ಮೇಲೂ ಇರುವದು ಬ್ರಹ್ಮವೇ. ಇದೆಲ್ಲವೂ ಅತ್ಯಂತಶ್ರೇಷ್ಠವಾದ ಬ್ರಹ್ಮವೇ."*

ಇದುವರೆಗೆ ಹೇಳಿದ್ದರ ಸಾರಸಂಗ್ರಹವನ್ನು ಇಲ್ಲಿ ತಿಳಿಸಲಾಗುತ್ತದೆ. ಕತ್ತಿಗೆ ಒರೆಯು ಹೇಗೋ ಹೃದಯವೆಂಬುದು ಆತ್ಮನಿಗೆ ಹಾಗೆ. ಹೃದಯವು ಅಥವಾ ಅಂತಃಕರಣವು ಎಲ್ಲಕ್ಕೂ ಒಳಗಿರುವ ಆತ್ಮನ ಸ್ಥಾನವಾಗಿರುತ್ತದೆ; ಅಲ್ಲಿಯೇ ಆತ್ಮತತ್ತ್ವವು ನಮಗೆ ಗೋಚರವಾಗುವದರಿಂದ ಅದೇ ಆತ್ಮನಿಗೆ ಉತ್ತಮಸ್ಥಾನವಾಗಿರುತ್ತದೆ. ಅಲ್ಲಿ ಆತ್ಮಪ್ರತ್ಯಯಾನುಸಾರಿಗಳಾಗಿ ಹುಡುಕುವವರಿಗೆ ಅವಿದ್ಯೆಯೇ ಮುಂತಾದ ಕಲ್ಮಶಗಳಿಲ್ಲದ,

ಯಾವ ಅವಯವಗಳೂ ಇಲ್ಲದೆ, ಸರ್ವರಿಗೂ ಆತ್ಮನಾಗಿರುವ ಶುದ್ಧ ಚೈತನ್ಯಪ್ರಕಾಶವಾಗಿರುವ ಬ್ರಹ್ಮವಸ್ತುವು ಗೋಚರವಾಗುವದು. ಇಂದ್ರಿಯಗಳು ಮತ್ತು ಮನಸ್ಸಿನ ವೃತ್ತಿಗಳು ಹೊರಗಿನ ವಿಷಯದ ಅರಿವನ್ನು ಮಾತ್ರ ಕೊಡುವವು; ಆದ್ದರಿಂದ ಆ ಬಾಹ್ಯಪ್ರತ್ಯಯಗಳನ್ನು ಬೆಂಬಿಡಿಯುವವರಿಗೆ ನಾನು ವಿಷಯಗಳನ್ನು ಕೇಳುವವನು, ಆಲೋಚಿಸುವವನು, ಚಿಂತಿಸುವವನು–ಎಂದು ಮುಂತಾಗಿಯೇ ಆತ್ಮಸ್ವರೂಪವು ಗೋಚರವಾಗುತ್ತದೆ. ಆದರೆ ಈ ಪ್ರತ್ಯಯಗಳೆಲ್ಲವನ್ನೂ ಬೆಳಗುತ್ತಿರುವ, ಪ್ರತ್ಯಯಗಳಿಗೆ ಹೊರಗಿನ ವಿಷಯವನ್ನು ತೋರಿಸುವ ಬೆಳಕನ್ನು ಎರವಲಾಗಿ ಕೊಡುತ್ತಿರುವ ಶುದ್ಧಚೈತನ್ಯವೇ ನಾನು ಎಂದು ಯಾರು ಕೇವಲಾತ್ಮಪ್ರತ್ಯಯವನ್ನು ಬೆನ್ನಟ್ಟಿ ಹುಡುಕುವರೋ ಅವರಿಗೆ ಸರ್ವಪ್ರತ್ಯಯಸಾಕ್ಷಿಯಾಗಿರುವ ಆತ್ಮರೂಪದಿಂದಲೇ ಅದು ಮನದಲ್ಲಿ ಮಿಂಚುವದು. ಆದ್ದರಿಂದ ವಿವೇಕಿಗಳಾದವರು ಹೊರಗಿನ ವಿಷಯಗಳ ಕಲೆಯುಳ್ಳ ಪ್ರತ್ಯಯಗಳನ್ನು ಬಿಟ್ಟು ಆತ್ಮಪ್ರತ್ಯಯವನ್ನೇ, ಎಂದರೆ ನಾನು ಎಂಬ ಅರಿವನ್ನೇ, ಮುಖ್ಯವಾಗಿ ಮಾಡಿಕೊಂಡು ಆತ್ಮನನ್ನು ಹುಡುಕಬೇಕು.

ಈ ಆತ್ಮಜ್ಯೋತಿಯು ಮಿಕ್ಕೆಲ್ಲ ಜ್ಯೋತಿಗಳಿಗೂ ಜ್ಯೋತಿಯಾಗಿರುತ್ತದೆ. ಹೇಗೆಂದರೆ: ಎಂಥ ಪ್ರಚಂಡಸೂರ್ಯನೂ ಈ ಆತ್ಮನನ್ನು ಬೆಳಗಲಾರನು. ಏಕೆಂದರೆ ಆತ್ಮತತ್ತ್ವವನ್ನು ಯಾವ ಕತ್ತಲೆಯೂ ಮುಸುಕಿರುವದಿಲ್ಲ. ಆದರೆ ಸೂರ್ಯನ ಬೆಳಕಿಗೆ ಕತ್ತಲೆಯನ್ನು ಚದರಿಸುವ ಶಕ್ತಿಯು ಮಾತ್ರ ಇರುತ್ತದೆ. ಆದ್ದರಿಂದ ಸೂರ್ಯನ ಬೆಳಕಿನಲ್ಲಿ ಆತ್ಮನನ್ನು ಕಂಡುಕೊಂಡೇವೆಂಬ ಆಸೆಯಿಲ್ಲ. ಇದೇ ಕಾರಣದಿಂದ ಸೌಮ್ಯವಾದ ಬೆಳಕಿನ ಚಂದ್ರನೂ, ಮಿಣುಗುಟ್ಟುತ್ತಿರುವ ನಕ್ಷತ್ರಗಳೂ ಆತ್ಮನನ್ನು ತೋರಿಸಬಲ್ಲವೆಂದು ಹಾರೈಸುವದಕ್ಕಿಲ್ಲ. ಹೀಗಿರುವದರಿಂದ ಈಗ ತೋರಿ ಒಂದು ಕ್ಷಣಮಾತ್ರದಲ್ಲಿ ಮಾಯವಾಗುವ ಮಿಂಚು ಆತ್ಮನನ್ನು ತೋರಿಸೀತೆಂಬುದು ತೀರ ಅಸಂಭವ ; ಇನ್ನು ನಾವೆಲ್ಲ ಕಂಡಿರುವ ಕೆಂಡದ ಬೆಳಕು ಅದನ್ನು ಬೆಳಗಲಾರದೆಂದು ಹೇಳುವದೇನಿದೆ? ಲೋಕದಲ್ಲಿ ಸೂರ್ಯಾದಿಗಳು ತಾವೂ ಬೆಳಗುತ್ತಾ ಮಿಕ್ಕ ವಸ್ತುಗಳನ್ನೂ ಬೆಳಗುತ್ತಿರುವವೆಂದು ಜನರ ನಂಬಿಕೆಯಿದೆ. ಅವುಗಳು ಯಾವವೂ ಆತ್ಮನನ್ನು ಬೆಳಗಲಾರವೆಂದರೆ ಆತ್ಮನು ಇದ್ದಾನೆಂಬುದಾದರೂ ಹೇಗೆ ನಂಬಿಕೆಗರ್ಹವಾದೀತು?–ಎಂದು ಶಂಕಿಸಬಾರದು. ಏಕೆಂದರೆ ಸೂರ್ಯಾದಿಗಳ ಬೆಳಕು ನೇತ್ರೇಂದ್ರಿಯಕ್ಕೆ ಸಹಾಯವಾಗಿದ್ದುಕೊಂಡು ಕತ್ತಲನ್ನು ತೊಲಗಿಸುವುದರ ಮೂಲಕ ವಿಷಯದ ಅರಿವಿಗೆ ಸಹಾಯವಾಗಿದೆಯೆಂಬುದಿಷ್ಟೇ ಅವುಗಳ ಹೆಚ್ಚುಗಾರಿಕೆ. ಆದರೆ ಸೂರ್ಯಾದಿಗಳು ಬೆಳಗಿದ ಮೇಲೂ ಆತ್ಮನ ಚೈತನ್ಯರೂಪವಾದ ಬೆಳಕಿನ ಸಂಬಂಧವಿಲ್ಲದೆ ಯಾವ

ವಸ್ತುವೂ ಇದೆಯೆಂದು ನಮಗೆ ತೋರಲಾರದು. ಇಷ್ಟೇಕೆ? ಬೆಳಕಿನ ರೂಪವೇ ಆಗಿರುವ ಸೂರ್ಯಾದಿಗಳು ಕೂಡ ಬರಿಯ ತಮ್ಮ ಬೆಳಕಿನಿಂದ ತಮ್ಮ ಇರವನ್ನು ತೋರಿಸಿಕೊಳ್ಳಲಾರವು; ಅವಕ್ಕೂ ಆತ್ಮನ ಚೈತನ್ಯಪ್ರಕಾಶದ ಸಂಬಂಧವೇ ಇರವನ್ನೂ ತೋರಿಕೆಯನ್ನೂ ಕೊಡಬಲ್ಲದು. ಯಾವದರ ಬೆಳಕಿಲ್ಲದೆ ಸೂರ್ಯಾದಿಗಳೂ ತೋರಿಕೊಳ್ಳಲಾರವೋ ಆ ಆತ್ಮತತ್ತ್ವದ ಸ್ವಯಂಪ್ರಕಾಶವೆಂಬುದನ್ನು ಹೇಳುವದೇನಿದೆ? ಇಲ್ಲಿ ಸೂರ್ಯಾದಿಗಳನ್ನು ಬೆಳಗುವದರಿಂದ ಆತ್ಮನು ಸ್ವಯಂಪ್ರಕಾಶನೆಂದು ನಾವು ಅನುಮಾನದಿಂದ ನಿರ್ಧರಿಸುತ್ತೇವೆಂದು ಮಾತ್ರ ಯಾರೂ ತಿಳಿಯಬಾರದು. ಏಕೆಂದರೆ ಯಾವ ಬೆಳಕಿನ ಆಧಾರದಿಂದಲೇ ಇದು ಇದೆ, ಇದು ಇಲ್ಲ; ಇದಕ್ಕೆ ಬೆಳಕಿದೆ, ಇದಕ್ಕಿಲ್ಲ– ಎಂದು ನಾವು ವಸ್ತುಗಳ ಇರವನ್ನೂ ತೋರಿಕೆಯನ್ನೂ ನಿರ್ಧರಿಸುತ್ತಿರುವೆವೋ ಆ ಆಧಾರವಾದ ಆತ್ಮಸ್ವರೂಪವನ್ನು ಬಿಟ್ಟು ನಾವು ಒಂದರೆಕ್ಷಣವೂ ಇರಲಾರೆವು; ಇನ್ನು ಅನುಮಾನಾದಿಪ್ರಮಾಣ ವ್ಯವಹಾರಗಳಿಗೂ ಈ ಆತ್ಮನೇ ಉಸಿರಾಗಿರುವನೆಂಬುದನ್ನು ಹೇಳಬೇಕೆ? ಆತ್ಮನು ಸ್ವಯಂಪ್ರಕಾಶನಾಗಿರುತ್ತಾನಾದ್ದರಿಂದಲೇ ಆ ಪ್ರಕಾಶದ ಆಧಾರದಿಂದ ಲೋಕದಲ್ಲಿ ವಸ್ತುಗಳಿಗೆ ಸಾಪೇಕ್ಷವಾದ ಬೆಳಕಿರುವಿಕೆ, ಬೆಳಕಿಲ್ಲದಿರುವಿಕೆ– ಎಂಬ ವ್ಯವಹಾರವು ಸಾಗಿರುತ್ತದೆ.

ಈ ಸ್ವಯಂಪ್ರಕಾಶವಾದ ಆತ್ಮತತ್ತ್ವವೇ ಬ್ರಹ್ಮವು. ಆದರಿಂದಲೇ ಚಂದ್ರ ಸೂರ್ಯಾದಿ ಅಧಿದೈವಿಕಪದಾರ್ಥಗಳೂ ನಮ್ಮ ಹೊರಗೆ ಕಾಣುತ್ತಿರುವ ಭೂತ ಭೌತಿಕದೃಶ್ಯಗಳೂ ನಮ್ಮೊಳಗಿರುವ ಶರೀರ, ಇಂದ್ರಿಯ, ಪ್ರಾಣ, ಮನಸ್ಸುಗಳೂ ಉಂಟಾಗಿ ಅದರ ಬೆಳಕಿನಿಂದಲೇ ಇವೆಯೆಂದು ತೋರಿಕೊಳ್ಳುತ್ತಿರುತ್ತವೆ. ಆದ್ದರಿಂದ ಆಧ್ಯಾತ್ಮಿಕಾದಿವಿಭಾಗವುಳ್ಳ ಯಾವದೊಂದು ಅನಾತ್ಮವೂ ಆತ್ಮನಲ್ಲಿ ತಾನುತಾನೇ ಇರುವದಿಲ್ಲ ; ತನ್ನ ರೂಪದಿಂದ ಅದು ಬರಿಯ ಮಾತಿನಿಂದ ಹೇಳುವ ವಿಕಲ್ಪಮಾತ್ರವಾಗಿರುತ್ತದೆ. ಅದರ ಪರಮಾರ್ಥರೂಪವೆಂದರೆ ಬ್ರಹ್ಮವೇ ಆಗಿರುತ್ತದೆ. ಆದ್ದರಿಂದ ನಮ್ಮ ಮುಂದೆ, ಹಿಂದೆ, ಬಲಕ್ಕೆ, ಎಡಕ್ಕೆ, ಮೇಲೆ, ಕೆಳಗೆ– ಎಲ್ಲಿ ನೋಡಿದರೂ ಅಲ್ಲಿ ಕಾಣಬರುವದೆಲ್ಲ ಪರಮಾರ್ಥವಾಗಿ ಬ್ರಹ್ಮವೊಂದೇ, ಬ್ರಹ್ಮಕ್ಕಿಂತ ಬೇರೆಯಾದ ಪದಾರ್ಥವೇ ಇಲ್ಲ– ಎಂಬುದೇ ಸಿದ್ಧಾಂತವು.



# 17. ಜೀವನೂ ಈಶ್ವರನೂ

ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ||1||

ಸಮಾನೇ ವೃಕ್ಷೇ ಪುರುಷೋ
ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ।
ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ
ಮಹಿಮಾನಮಿತಿ ವೀತಶೋಕಃ ||2||

ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ
ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।
ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ
ನಿರಞ್ಜನಃ ಪರಮಂ ಸಾಮ್ಯಮುಪೈತಿ ||3||

ಪ್ರಾಣೋ ಹ್ಯೇಷ ಯಃ ಸರ್ವಭೂತೈರ್ವಿಭಾತಿ
ವಿಜಾನನ್ ವಿದ್ವಾನ್ ಭವತೇ ನಾತಿವಾದೀ ।
ಆತ್ಮಕ್ರೀಡಃ ಆತ್ಮರತಿಃ ಕ್ರಿಯಾವಾನ್
ಏಷ ಬ್ರಹ್ಮವಿದಾಂ ವರಿಷ್ಟಃ ||4||

*"ಎರಡು ಹಕ್ಕಿಗಳು ಜೊತೆಯಲ್ಲಿಯೇ ಇದ್ದುಕೊಂಡು ಸಖರಾಗಿ ಒಂದೇ ಮರವನ್ನು ಅಪ್ಪಿಕೊಂಡಿರುತ್ತವೆ. ಅವುಗಳಲ್ಲಿ ಒಂದು ಸವಿಸವಿಯಾದ ಪಿಪ್ಪಲವನ್ನು ತಿನ್ನುತ್ತಿದೆ, ಮತ್ತೊಂದು ತಿನ್ನದೆ ನೋಡುತ್ತಿದೆ. ಅದೇ ಮರದಲ್ಲಿ ಪುರುಷನು ಮುಳುಗಿಬಿಟ್ಟು ಅಸಾಮರ್ಥ್ಯದಿಂದ ಮೋಹಗೊಂಡು ಶೋಕಿಸುತ್ತಿರುವನು. ಸೇವನೆಯಿಂದ ತನಗಿಂತ ಬೇರೆಯಾಗಿರುವ ಈಶ್ವರನನ್ನು ಯಾವಾಗ ಕಂಡುಕೊಳ್ಳುವನೋ, ಅವನ ಮಹಿಮೆ ಯೆಂದು ಯಾವಾಗ ಕಂಡುಕೊಳ್ಳುವನೋ, ಆಗ ಶೋಕವನ್ನು ನೀಗಿಕೊಳ್ಳುವನು. ಯಾವಾಗ ಈ ನೋಟಕನು ಭಂಗಾರದವರ್ಣದ, ಕರ್ತೃವಾದ, ಈಶ್ವರನಾದ, ಬ್ರಹ್ಮಯೋನಿಯಾದ, ಪುರುಷನನ್ನು ಕಂಡುಕೊಳ್ಳುವನೋ ಆಗ ಆ ಜ್ಞಾನಿಯು ಪುಣ್ಯಪಾಪಗಳನ್ನು ಕೊಡವಿಕೊಂಡು ನಿರ್ಲೇಪನಾಗಿ ಪರಮಸಾಮ್ಯವನ್ನು*

*ಪಡೆಯುತ್ತಾನೆ. ಯಾವನು ಸರ್ವಭೂತಗಳ ರೂಪದಲ್ಲಿ ಕಾಣುತ್ತಿರುವನೋ ಅವನು ಈ ಪ್ರಾಣನೇ. ಇವನನ್ನು ಅರಿತುಕೊಂಡವನು ಅತಿವಾದಿಯಾಗನು ; ಅವನು ಆತ್ಮಕ್ರೀಡನು, ಆತ್ಮರತಿಯು, ಕ್ರಿಯೆಯುಳ್ಳಾತನು, ಅವನೇ ಬ್ರಹ್ಮವೇತ್ತರಲ್ಲೆಲ್ಲ ಮುಖ್ಯನಾದವನು.''*

ಪುರುಷನೆಂಬ ನಾಶರಹಿತವಸ್ತುವನ್ನು ಅರಿತುಕೊಳ್ಳುವದೇ ಪರವಿದ್ಯೆಯೆಂದೂ ಅದನ್ನು ಅರಿತುಕೊಂಡರೆ ಹೃದಯದ ಗಂಟೇ ಮುಂತಾದ ಸಂಸಾರದ ಮೂಲವು ಅತ್ಯಂತವಾಗಿ ನಾಶವಾಗಿಬಿಡುವದೆಂದೂ ತಿಳಿಸಿದ್ದಾಯಿತು. ಅದನ್ನು ಕಂಡುಕೊಳ್ಳುವದಕ್ಕೆ ಪ್ರಣವದ ಬಿಲ್ಲೇ ಮುಂತಾದದ್ದನ್ನು ಸಾಧಿಸಿಕೊಳ್ಳಬೇಕೆಂಬುದನ್ನೂ ತಿಳಿಸಿದ್ದಾಯಿತು. ಈಗ ಆ ಯೋಗಕ್ಕೆ ಸಹಕಾರಿಯಾಗಿರುವ ಸತ್ಯವೇ ಮುಂತಾದ ಕೆಲವು ಸಾಧನಗಳನ್ನು ತಿಳಿಸಬೇಕಾಗಿರುತ್ತದೆ. ಅದಕ್ಕಾಗಿ ಈ ಮುಂದಿನ ಗ್ರಂಥವನ್ನು ಮೊದಲುಮಾಡಿದೆ. ಅದಕ್ಕಿಂತಲೂ ಮೊದಲು ಮತ್ತೊಂದು ರೀತಿಯಿಂದಲೂ ಪರಮಾತ್ಮತತ್ತ್ವವನ್ನು ತಿಳಿಸುವದಕ್ಕೆ ಪ್ರಾರಂಭಮಾಡಿರುತ್ತಾರೆ.

ಒಂದು ಮರದಲ್ಲಿ ಅನೇಕ ಹಕ್ಕಿಗಳು ಕುಳಿತುಕೊಂಡಿರಬಹುದು, ಆದರೆ ಅವುಗಳೆಲ್ಲವೂ ಮರದ ಹಣ್ಣನ್ನು ತಿನ್ನುತ್ತಲೇ ಇರುವದಿಲ್ಲ. ಒಂದು ಹಕ್ಕಿಯು ಹಣ್ಣನ್ನು ತಿನ್ನುತ್ತಿರುತ್ತದೆ, ಮತ್ತೊಂದು ಕೂಗುತ್ತಿರುತ್ತದೆ, ಮಗದೊಂದು ಸುಮ್ಮನೆ ನೋಡುತ್ತಿರುತ್ತದೆ. ಇದು ಲೋಕದಲ್ಲಿ ಕಂಡುಬಂದಿರುವ ಒಂದು ದೃಷ್ಟಾಂತವು. ಇದನ್ನು ಜೀವಪರಮೇಶ್ವರರ ವಿವೇಕವನ್ನು ಮಾಡಿಕೊಳ್ಳಬೇಕೆನ್ನುವವರಿಗಾಗಿ ಶ್ರುತಿಯು ಉಪಯೋಗಿಸಿಕೊಂಡು ಹೀಗೆ ಹೇಳುತ್ತಿದೆ :–ಈ ಶರೀರವೆಂಬುದೊಂದು ಮರವೆಂದು ಭಾವಿಸಿದರೆ ಇದರಲ್ಲಿ ಎರಡು ಗೆಳೆಯರಾದ ಹಕ್ಕಿಗಳಿರುತ್ತವೆ. ಇದರಲ್ಲಿ ಒಂದು ಜೀವ, ಇನ್ನೊಂದು ಈಶ್ವರ. ಜೀವನು ಮರದ ಹಣ್ಣನ್ನು ತಿನ್ನುತ್ತಿರುವನು, ಈಶ್ವರನು ನೋಡುತ್ತಿರುವನು. ಹಣ್ಣನ್ನು ತಿನ್ನುತ್ತಿರುವ ಜೀವನನ್ನು ನಾವೆಲ್ಲರೂ ಬಲ್ಲೆವು. ಆದರೆ ಅವನಿಗಿಂತ ಬೇರೆಯಾಗಿ ಅವನಿರುವ ಶರೀರದಲ್ಲಿಯೇ ಇದ್ದುಕೊಂಡಿರುವ ಈಶ್ವರನನ್ನು ನಾವು ಅರಿಯೆವು. ಜೀವನನ್ನು ಅರಿತಿರುವದರಿಂದ ನಮಗೆ ಸುಖವಿಲ್ಲ. ಈಶ್ವರನನ್ನು ಅರಿತುಕೊಂಡರೆ ಸುಖವುಂಟು. ಒಂದೇ ಮರದಲ್ಲಿ ಒಂದೇ ಕೊಂಬೆಯಲ್ಲಿ ಕುಳಿತಿರುವ ಎರಡು ಒಂದೇ ಬಣ್ಣದ ಹಕ್ಕಿಗಳಲ್ಲಿ ಇದೊಂದು, ಅದು ಇನ್ನೊಂದು–ಎಂದು ತಿಳಿದುಕೊಂಡಿರುವವರು ಮತ್ತೊಬ್ಬರಿಗೆ ತಿಳಿಸಬೇಕಾದರೆ ಅವುಗಳಿಗೆ ಇರುವ ವೈಲಕ್ಷಣ್ಯವನ್ನು ತಿಳಿಸುವಂತೆ ಶ್ರುತಿಯು ಇಲ್ಲಿ ಜೀವನಿಗೂ ಈಶ್ವರನಿಗೂ ಇರುವ ವೈಲಕ್ಷಣ್ಯವನ್ನು ಸುಂದರವಾದ ರೀತಿಯಿಂದ ತಿಳಿಸಿರುತ್ತದೆ.

ಮೊದಲು ಶರೀರವೆಂಬ ಮರದ ವಿಚಾರವನ್ನು ಮಾಡೋಣ. ಇದನ್ನೇ ಅಶ್ವತ್ಥವೃಕ್ಷವೆಂದು ಕಠೋಪನಿಷತ್ತಿನಲ್ಲಿಯೂ ಗೀತೆಯಲ್ಲಿಯೂ ವರ್ಣಿಸಿದೆ. ಈ ಮರಕ್ಕೆ ಬುಡವು ಮೇಲುಗಡೆ ಇದೆ, ಕೊಂಬೆಗಳು ಕೆಳಗಡೆ ಇವೆ–ಎಂದು ಅಲ್ಲಿ ಹೇಳಿರುತ್ತದೆ. ಸಂಸಾರದಲ್ಲಿ ತೊಳಲುತ್ತಿರುವ ಜೀವರುಗಳು ಆಶ್ರಯಿಸಿರುವ ಶರೀರವನ್ನು ನಾವು ನೋಡುತ್ತಿದೇವೆ. ಆದರೆ ಈ ಶರೀರವು ಪಂಚಭೂತಗಳಿಂದಾಗಿರುತ್ತದೆಯೆಂದೂ ಇದರ ಮೂಲವು ಪ್ರಲಯಕಾಲದಲ್ಲಿ ಅತ್ಯಂತ ಸೂಕ್ಷ್ಮವಾದ ಅವ್ಯಕ್ತವಾದ ಕಾರಣಾವಸ್ಥೆಯನ್ನು ಹೊಂದುವದೆಂದೂ ಆಗಲೂ ಅದಕ್ಕೆ ಆಧಾರವಾಗಿ ಪರಮೇಶ್ವರನು ಇರುವನೆಂದೂ ನಾವು ಯೋಚಿಸುವದಿಲ್ಲ. ಈ ಶರೀರವು ನಮ್ಮದೇ, ನಾವೇ ಇದನ್ನು ಸಂಪಾದಿಸಿಕೊಂಡು ಬಂದಿರುತ್ತೇವೆ–ಎಂಬ ಅಭಿಮಾನವನ್ನು ತಾಳಿರುತ್ತೇವೆ. ಹೀಗೆ ಅಭಿಮಾನವನ್ನು ತಾಳಿರುವ ನಮ್ಮ ಸ್ವರೂಪಕ್ಕೆ ಜೀವನು ಎಂದು ಹೆಸರು.

ಈ ಜೀವನು ನಿಜವನ್ನರಿಯದೆ ತಪ್ಪುತಿಳಿವಿನಿಂದ ಹೊರಗೆ ಬಗೆಬಗೆಯ ವಸ್ತುಗಳನ್ನು ಕಂಡು ಅವುಗಳನ್ನು ಪಡೆದುಕೊಳ್ಳಬೇಕೆಂದು, ಮತ್ತೆ ಕೆಲವನ್ನು ತೊಲಗಿಸಿ ಕೊಳ್ಳಬೇಕೆಂದು, ಹವಣಿಸುತ್ತಾ ಬಗೆಬಗೆಯ ಕರ್ಮವನ್ನು ಮಾಡುತ್ತಿರುವನು. ಆ ಕರ್ಮದ ಫಲವನ್ನು ಅನುಭವಿಸುವದಕ್ಕಾಗಿ ಅದಕ್ಕೆ ತಕ್ಕ ಒಂದೊಂದು ಶರೀರವನ್ನು ಹೊಸಹೊಸದಾಗಿ ಪಡೆದುಕೊಳ್ಳುತ್ತಿರುವನು. ಮರದಲ್ಲಿ ಹೊರಗೆ ಗಟ್ಟಿಯಾದ ಭಾಗವೂ ಒಳಗೆ ರಸಯುಕ್ತವಾದ ಮೆದುವಾದ ಮತ್ತೊಂದು ಭಾಗವೂ ಇರುವಂತೆ ಶರೀರದಲ್ಲಿಯೂ ಸ್ಥೂಲ, ಸೂಕ್ಷ್ಮ–ಎಂಬ ಎರಡು ಭಾಗವಿರುವದು. ಸ್ಥೂಲಶರೀರದಲ್ಲಿ ಆದ ಅನುಭವಗಳ ಸಂಸ್ಕಾರವು ಸೂಕ್ಷ್ಮಶರೀರದಲ್ಲಿ ಇಳಿದುಕೊಂಡಿರುತ್ತದೆ. ಆ ವಾಸನೆಯಿಂದ ಮತ್ತೆಮತ್ತೆ ಕಾಮವಶನಾಗಿ ಜೀವನು ಕರ್ಮವನ್ನು ಮಾಡಿ ಮಾಡಿ ಹೊಸ ಹೊಸ ಸ್ಥೂಲಶರೀರವನ್ನು ಪಡೆದುಕೊಳ್ಳುತ್ತಿರುವನು. ಇದೇ ಸಂಸಾರವೃಕ್ಷವು. ವೃಕ್ಷದಲ್ಲಿರುವ ಹಣ್ಣುಗಳು ಸಪ್ಪೆ, ಒಗರು, ಹುಳಿ, ಸಿಹಿ, ಕಹಿ–ಮುಂತಾದ ಬಗೆಬಗೆಯ ಸವಿಯುಳ್ಳವಾಗಿರುವಂತೆ ಪುಣ್ಯಾಪಾಪಗಳು ಪರಿಪಾಕದಿಂದ ಬಗೆಬಗೆಯ ಸವಿಯನ್ನುಂಟುಮಾಡುತ್ತಾ ಸುಖದುಃಖಾದಿಗಳನ್ನುಂಟುಮಾಡುತ್ತಿರುವವು. ಜೀವನು ಒಲ್ಲೆನೆಂದರೂ ಆ ಹಣ್ಣುಗಳ ಸವಿಯನ್ನು ನೋಡದೆ ಇರುವದಕ್ಕೆ ಅವನಿಂದಾಗದು. ಅವನು ಅನೀಶನು ಎಂದರೆ ಅಸಮರ್ಥನು. ಅವನು ಮರವನ್ನು ಅಪ್ಪಿಕೊಂಡು ಅದೇ ನಾನೆಂದು ಸಂಸಾರದಲ್ಲಿ ಮುಳುಗಿಬಿಟ್ಟಿರುತ್ತಾನೆ. ನಾನು ಇಂಥವನು, ಇಂಥವನ ಮಗನು, ಇವನ ಮೊಮ್ಮಗನು; ಬಡವಾದೆನು, ದಪ್ಪನಾದೆನು, ಗುಣವಂತನಾಗಿರುವೆನು, ಗುಣಹೀನನಾದೆನು, ಸುಖಿಯಾಗಿರುವೆನು, ದುಃಖಿಯಾಗಿರುವೆನು–ಎಂದು ಆಯಾ ಸಂದರ್ಭಕ್ಕೆ ತಕ್ಕಂತೆ

ಕಲ್ಪಿಸಿಕೊಳ್ಳುತ್ತಾ ''ಅಯ್ಯೋ! ಈ ರೋಗವನ್ನು ಹೇಗೆ ಬಗೆಹರಿಸಿಕೊಳ್ಳಲಿ! ಹಣವು ಹೋಯಿತಲ್ಲ, ಏನುಮಾಡಲಿ! ಹೆಂಡತಿ ಸತ್ತಳು, ಮಕ್ಕಳು ಹೋದರು, ಇನ್ನಾರು ನನಗೆ ಗತಿ? ನಾನು ಬದುಕಿದ್ದುತಾನೆ ಫಲವೇನು?'' ಎಂದು ಕಂದಿಕುಂದಿ ಬಳಲಿಬೆಂಡಾಗಿ ಕಳವಳಪಡುತ್ತಾ ಹುಟ್ಟುತ್ತಲೂ ಸಾಯುತ್ತಲೂ ಮನುಷ್ಯನಾಗುವನು, ಪ್ರಾಣಿಯಾಗುವನು, ಪಿಶಾಚಿಯಾಗುವನು, ದೇವತೆಯಾಗುವನು. ಹೀಗೆಲ್ಲ ಸಂಸಾರದಲ್ಲಿ ತೊಳಲುತ್ತಾ ಅದನ್ನು ತಪ್ಪಿಸಿಕೊಳ್ಳಲಾರದೆ ಅಳಲಿನಿಂದ ಸಂಕಟಪಡುತ್ತಿರುವದಕ್ಕೆ ಇವನ ಅವಿವೇಕವೇ ಕಾರಣವು. ಇದೇ ಸಂಸಾರವೃಕ್ಷದಲ್ಲಿ ಮತ್ತೊಬ್ಬನು ಈಶ್ವರನು ಇರುತ್ತಾನೆಂಬದಾಗಲಿ, ಆತನ ಸ್ವರೂಪವೇ ಪರಮಾರ್ಥವಾಗಿ ತನ್ನ ಸ್ವರೂಪವೆಂದಾಗಲಿ ಇವನಿಗೆ ತಿಳಿಯದು. ಇದು ಜೀವನ ಸ್ಥಿತಿ.

ಇನ್ನು ಈಶ್ವರನ ಸ್ವರೂಪವನ್ನೂ ಅವನನ್ನು ಗುರುತಿಸುವ ಉಪಾಯವನ್ನೂ ವಿಚಾರಮಾಡೋಣ. ಜೀವನನ್ನು ಮೇಲೆ ಹೇಳುವ ಸೂಕ್ಷ್ಮಶರೀರದಿಂದ ಗುರುತಿಸಬೇಕಾಗಿರುವದರಿಂದ ಆ ಶರೀರಕ್ಕೆ ಲಿಂಗಶರೀರ (ಗುರುತಿಸುವದಕ್ಕೆ ಚಿಹ್ನೆಯಾದ ಶರೀರ)ವೆಂದೂ ಹೆಸರು. ಆದರೆ ಈಶ್ವರನು ಲಿಂಗಶರೀರದಲ್ಲಿ ತೋರಿಬರುವ ಸಂಸಾರವಾಸನೆಗಳಿಗೆ ಕಟ್ಟುಬಿದ್ದಿರುವದಿಲ್ಲ; ಆತನು ಎಲ್ಲಾ ಶರೀರಗಳೊಳಗೂ ಜೀವನೊಡನೆಯೇ ಇರುತ್ತಾನಾದರೂ ಆ ಶರೀರಗಳಲ್ಲಿ ಯಾವದೊಂದರ ಅಭಿಮಾನವನ್ನೂ ಅವನು ಹಿಡಿದಿರುವದಿಲ್ಲ, ಅವನು ಎಲ್ಲರಲ್ಲಿರುವ ಅಂತಃಕರಣವೃತ್ತಿಗಳನ್ನೂ ನೋಡುತ್ತಿರುವ ಸಾಕ್ಷಿಯಾಗಿರುವನು. ಮೇಲೆ ಹೇಳಿದ ಕರ್ಮಫಲವೆಂಬ ಭೋಜ್ಯ, ಅದನ್ನುಣ್ಣುವ ಜೀವನೆಂಬ ಭೋಕ್ತ–ಇಬ್ಬರೂ ಆತನ ಸನ್ನಿಧಿಯಲ್ಲಿ ಒಬ್ಬರಿಗೊಬ್ಬರು ಸಂಬಂಧಿಸುತ್ತಿರುವರು. ಆತನು ಮಾತ್ರ ನಿತ್ಯಶುದ್ಧಬುದ್ಧ ಮುಕ್ತಸ್ವಭಾವನಾಗಿ ಹಸಿವು, ನೀರಡಿಕೆ, ಶೋಕ, ಮೋಹ, ಮುಪ್ಪು, ಸಾವು– ಯಾವದೊಂದಕ್ಕೂ ಅಂಟದೆ ತನ್ನ ಚೈತನ್ಯಸ್ವರೂಪವಾದ ನೋಟದಿಂದ ಎಲ್ಲವನ್ನೂ ನೋಡುತ್ತಿರುವನು.

ಹೀಗೆ ಏನನ್ನೂ ಮಾಡದೆ ಯಾವದನ್ನೂ ಅನುಭವಿಸದೆ ಎಲ್ಲಕ್ಕೂ ಸಾಕ್ಷಿಯಾಗಿರುತ್ತಿದ್ದರೂ ಆತನೇ ಈಶ್ವರನು. ಆತನ ಸಾಮರ್ಥ್ಯದಿಂದಲೇ ಎಲ್ಲವೂ ಸಾಗಿರುವದು. ಈ ಹಿಂದೆಯೇ ವರ್ಣಿಸಿರುವಂತೆ ಇಡಿಯ ವಿಶ್ವವೇ ಆತನ ಮಹಿಮೆಯು. ಈ ಸ್ವರೂಪವನ್ನು ಜೀವನು ಕಂಡುಕೊಂಡನೊ ಇಲ್ಲವೊ, ಕೂಡಲೆ ಜೀವನು ಶೋಕರಹಿತನಾಗುವನು. ಇದು ಹೇಗಾದೀತು?–ಎಂದು ಶಂಕಿಸಬಾರದು. ಜೀವನೂ ಈಶ್ವರನೂ ಬೇರೆಬೇರೆಯಾದ ತತ್ತ್ವವಾಗಿದ್ದರೆ ಈಶ್ವರನನ್ನು ಕಂಡಮಾತ್ರದಿಂದ

ಎಂದಿಗೂ ಅವನ ಶೋಕವು ಅಡಗಬಾರದೆಂಬುದು ಸಹಜವಾಗಿರುತ್ತಿತ್ತು. ಆದರೆ ನಿಜವಾಗಿ ಹಾಗಿಲ್ಲ. ನಾವು ಮೇಲೆ ಹೇಳಿರುವಂತೆ ಜೀವನೂ ಈಶ್ವರನೂ ಬೇರೆಬೇರೆ ಎರಡು ಹಕ್ಕಿಗಳಂತೆ ಕಂಡರೂ ನಿಜವಾಗಿ ಎರಡು ಅತ್ಯಂತಭಿನ್ನವಾದ ಹಕ್ಕಿಗಳು ಇಲ್ಲಿರುವದಿಲ್ಲ. ಒಂದೇ ಶರೀರದಲ್ಲಿ ಒಟ್ಟಿಗೆ ತೋರುವ ಈ ಎರಡು ಹಕ್ಕಿಗಳ ರೂಪದಲ್ಲಿ ಒಂದು ಮಾಯಾರೂಪವು, ಇನ್ನೊಂದು ನಿಜವಾದ ರೂಪವು. ಮುಖದ ಮುಂದೆ ಕನ್ನಡಿಯನ್ನು ಹಿಡಿದುಕೊಂಡು ಅಲುಗಿಸುತ್ತಿದ್ದರೆ ಪ್ರತಿಬಿಂಬವು ಅಲುಗಾಡುವಂತೆ ತೋರುವದಿಲ್ಲವೆ? ಹಾಗೆ ಅವಿವೇಕದಿಂದ ಜೀವನು ಸಂಸಾರದಲ್ಲಿ ತೊಳಲುತ್ತಿರುವಂತೆಯೂ ಈಶ್ವರನು ಸುಮ್ಮನಿರುವಂತೆಯೂ ಕಾಣುತ್ತಿರುವದು. ಲಿಂಗಶರೀರದ ಅಭಿಮಾನದಿಂದ ನೋಡಿದಾಗ ನಾವೇ ಜೀವರಾಗಿ ಕಾಣುವೆವು; ಎಲ್ಲವನ್ನೂ ನೋಡುತ್ತಿರುವ ಸಾಕ್ಷಿರೂಪದಿಂದ ನೋಡುವಾಗ ನಾವು ಯಾವದೊಂದು ಶರೀರಕ್ಕೂ ಕಟ್ಟುಬೀಳದ ಚೈತನ್ಯ ಸ್ವರೂಪರಾಗಿರುವೆವು. ಅಷ್ಟೆ.

ಆದರೆ ಈ ತತ್ತ್ವವು ಎಲ್ಲರಿಗೂ ಸುಲಭವಾಗಿ ತಿಳಿಯುವದಿಲ್ಲ. ಯಾವನು ಅನೇಕ ಜನ್ಮಗಳಲ್ಲಿ ಮಾಡಿರುವ ಪುಣ್ಯದ ಬಲದಿಂದ ಚಿತ್ತಶುದ್ಧಿಯನ್ನು ಪಡೆದಿರುವನೋ, ಯಾವನಿಗೆ ಅಹಿಂಸೆ, ಸತ್ಯ, ಬ್ರಹ್ಮಚರ್ಯ, ಸರ್ವತ್ಯಾಗ, ಶಮದಮ–ಮುಂತಾದ ಸಾಧನಗಳು ಅಳವಟ್ಟಿರುವವೋ, ಅಂಥವನಿಗೆ ಮಾತ್ರ ಅಂತಃಕರಣವು ಹೊಯ್ದಾಡದೆ ನಿಂತುಕೊಳ್ಳುವದು. ಅಂಥವನಿಗೆ ಮಾತ್ರ ಬುದ್ಧಿವೃತ್ತಿಗಳಿಗೆಲ್ಲವೂ ಸಾಕ್ಷಿಯಾದ ಈಶ್ವರಸ್ವರೂಪವು ತನ್ನ ಪರಮಾತ್ಮನೇ ಎಂದು ಮನಗಾಣುವದು. ಅವನಿಗೇ ಈ ಜಗತ್ತೆಲ್ಲವೂ ಒಬ್ಬ ಪರಮಾತ್ಮನ ಮಹಿಮೆಯು, ನಾವು ಆತನಿಗಿಂತ ಕೂದಲೆಳೆಯುವಷ್ಟೂ ಬೇರೆಯಾಗಿರುವದಿಲ್ಲ–ಎಂಬ ಉತ್ತಮತತ್ತ್ವವು ಹೊಳೆಯುವದು. ಆಗ ಅವನಿಗೆ ಸಂಸಾರಶೋಕವು ತೊಲಗುವದು.

ಪರಮೇಶ್ವರನು ಬಂಗಾರದಂತೆ ಥಳಗುಟ್ಟುತ್ತಿರುವ ಸ್ವಯಂಪ್ರಕಾಶ ಸ್ವರೂಪನು. ಅವನ ಚೈತನ್ಯದ ಬೆಳಕು ಎಂದಿಗೂ ಆರಿಹೋಗುವಂತಿರುವದಿಲ್ಲ. ಆತನೇ ಎಲ್ಲಾ ಜಗತ್ತಿಗೂ ಕರ್ತನು, ಆತನೇ ಸರ್ವಸಮರ್ಥನು. ಆತನೇ ಹಿರಣ್ಯಗರ್ಭನಿಗೂ ಮೂಲಕಾರಣವು, ಜಗತ್ತಿಗೆಲ್ಲ ಪರಮಕಾರಣವಾಗಿರುವ ಪರಬ್ರಹ್ಮವು. ಹೀಗೆಂದು ಯಾವಾಗ ಚೈತನ್ಯರೂಪದ ತನ್ನ ರೂಪದಿಂದಲೇ ಆ ಅದ್ವಿತೀಯ ಅನುಭವೈಕವೇದ್ಯವಾದ ಈಶ್ವರಸ್ವರೂಪವನ್ನು ಕಂಡುಕೊಳ್ಳುವನೋ, ಆಗ ಅವನು ಬ್ರಹ್ಮಸ್ವರೂಪದಲ್ಲಿಯೇ ನೆಲೆನಿಂತಿರುವನಾದ್ದರಿಂದ ಅವನಿಗೆ ಯಾವ ಪುಣ್ಯಪಾಪಗಳ ಭೋಗವಾಗಲಿ ಸಂಸಾರದ ಸೋಂಕಾಗಲಿ ಇರುವದಿಲ್ಲ. ಆಗ ಅವನಿಗೂ ಪರಮಾತ್ಮನಿಗೂ ಪರಮ

ಸಾಮ್ಯವಾಗಿರುವದು. 'ಇದರಂತೆ ಇನ್ನೊಂದು' ಎಂಬಂತೆ ನಾವು ಹೇಳುವ ಲೌಕಿಕಸಾಮ್ಯಗಳಲ್ಲಿ ಹೋಲಿಸಿದ ವಸ್ತುಗಳಿಗೆ ಏನಾದರೊಂದು ವೈಷಮ್ಯವು ಇದ್ದೇ ಇರುತ್ತದೆ. ಒಂದು ವಸ್ತುವಿಗೂ ಮತ್ತೊಂದಕ್ಕೂ ಯಾವದೊಂದು ಹೆಚ್ಚುಕಡಿಮೆಯನ್ನೂ ಕಂಡುಹಿಡಿಯುವದಕ್ಕಾಗಲಾರದೆಂದು ನಾವು ಊಹಿಸಬಹುದಾದ ಲೌಕಿಕದೃಷ್ಟಾಂತ ಸ್ಥಲಗಳಲ್ಲಿ ಕೂಡ ಮತ್ತೆ ಯಾವ ತಾರತಮ್ಯವೂ ಇಲ್ಲದಿದ್ದರೂ ಅದು, ಇದು; ಅಲ್ಲಿ, ಇಲ್ಲಿ ; ಆಗ, ಈಗ; ಹಾಗೆ ಉಂಟಾದದ್ದು , ಹೀಗೆ ಉಂಟಾದದ್ದು–ಎಂಬ ರೀತಿಯ ದೇಶಕಾಲನಿಮಿತ್ತಗಳಿಂದಾದ ಒಂದಿಷ್ಟಾದರೂ ವೈಷಮ್ಯವು ಇದ್ದೇ ಇರುತ್ತದೆ. ಆದರೆ ಜ್ಞಾನಿಗೂ ಪರಮಾತ್ಮನಿಗೂ ಇರುವ ಸಾಮ್ಯವು ಅಂಥದ್ದಲ್ಲ. ಅದು ಪರಮಸಾಮ್ಯವು. ಇಲ್ಲಿ ಯಾವದೊಂದು ಹೆಚ್ಚುಕಡಿಮೆಯನ್ನೂ ಉತ್ಪ್ರೇಕ್ಷಿಸುವದಕ್ಕೆ ಬರುವಂತೆಯೇ ಇರುವದಿಲ್ಲ. ಏಕೆಂದರೆ ದೇಶ, ಕಾಲ, ನಿಮಿತ್ತ–ಮುಂತಾದ ದ್ವೈತವನ್ನೆಲ್ಲ ನುಂಗಿದ ಸಜಾತೀಯವಿಜಾತೀಯಸ್ವಗತಭೇದಗಳನ್ನರಿಯದ ನಿರ್ವಿಶೇಷವಾದ ಶುದ್ಧಚೈತನ್ಯ ಸ್ವರೂಪವೇ ಬ್ರಹ್ಮವು, ಆ ಸ್ವರೂಪವೇ ತನ್ನದೆಂದು ಕಂಡುಕೊಂಡವನೇ ಜ್ಞಾನಿಯು. ಆದ್ದರಿಂದ ಈ ಸಂಬಂಧದಲ್ಲಿ ಯಾವದೊಂದು ತಾರತಮ್ಯವನ್ನೂ ಕಲ್ಪಿಸುವದಕ್ಕೆ ಬರುವದೇ ಇಲ್ಲ.

ಶ್ರುತಿಯಲ್ಲಿ ಹೇಳಿರುವ ಈ ಪರಮಸಾಮ್ಯವನ್ನು ಅರಿತುಕೊಳ್ಳುವಾಗ ಒಂದು ವಿಷಯವನ್ನು ನಾವು ಮರೆಯದೆ ಇರಬೇಕು. ಪರಮಾತ್ಮನು ಜೀವಾತ್ಮನಂತೆ ಆಗುವನೆಂಬುದು ಶ್ರುತಿಯ ಅರ್ಥವಲ್ಲವೆಂಬುದು ಮೇಲೆಯೇ ಕಾಣಿಸುತ್ತದೆ. ಏಕೆಂದರೆ ಪರಮಾತ್ಮನು ಅಸಂಸಾರಿಯು, ನಿತ್ಯಶುದ್ಧಬುದ್ಧಮುಕ್ತನು. ಅವನಿಗೆ ಜೀವನ ಸಾಮ್ಯವುಂಟಾದರೆ ಅವನಿಗೇ ಸಂಸಾರವುಂಟಾಗುವದೆಂದು ಹೇಳಿದಂತೆ ಆಗುವದು. ಅದು ಅಸಂಭಾವಿತವಾದ ಮಾತು. ಪರಮಾತ್ಮನಿಗೆ ಸಂಸಾರವುಂಟಾಗುವದೆಂದರೆ ಸೂರ್ಯನಿಗೆ ಕತ್ತಲೆಯು ಮುಸುಕುವದು ಎನ್ನುವಂತೆ ಇರುವ ಮಾತು. ಆದ್ದರಿಂದ ಪರಮಾತ್ಮನು ಜೀವನ ಸಾಮ್ಯವನ್ನು ಪಡೆಯುವದಿಲ್ಲವೆಂಬುದು ಸ್ಪಷ್ಟವೇ. ಆದರೆ ಜೀವನು ಪರಮಾತ್ಮನ ಸಾಮ್ಯವನ್ನು ಪಡೆಯುವನೆಂಬುದೂ ಶ್ರುತಿಯ ಅರ್ಥವಲ್ಲವೆಂಬುದನ್ನು ನಾವು ಇಲ್ಲಿ ತಿಳಿದುಕೊಳ್ಳಬೇಕಾದದ್ದಿದೆ. ಸಂಸಾರಿಯಾಗಿದ್ದವನು ತನ್ನ ಸಂಸಾರಿತ್ವವನ್ನು ಕಳಚಿಕೊಂಡರೆ ಉಳಿಯುವ ಬಗೆ ಹೇಗೆ? ಸಂಸಾರಿತ್ವವೆಂಬುದೇನೂ ಕವಚದಂತೆ ತೊಟ್ಟುಕೊಳ್ಳುವದಕ್ಕೂ ಬಿಚ್ಚಿಡುವದಕ್ಕೂ ಬರಬಹುದಾದ ಹೊರಗಿನ ವಸ್ತುವಲ್ಲ. ತಾಮ್ರಾದಿಲೋಹಗಳಿಗೆ ಕಿಲುಬು ಹಿಡಿದಿರುವಂತೆ ಜೀವನಿಗೆ ಸಂಸಾರದ ಕಿಲುಬು ಹಿಡಿದಿರುವದೆಂದೂ ಧ್ಯಾನಾದಿಗಳಿಂದ ಅದನ್ನು

ತೊಳೆದುಕೊಂಡು ಪರಮಾತ್ಮನ ಸಾಮ್ಯವನ್ನು ಪಡೆಯುವನೆಂದೂ ಹೇಳುವದಕ್ಕಾಗುವದಿಲ್ಲ ; ಏಕೆಂದರೆ ತಾಮ್ರಾದಿಗಳಂತೆ ಜೀವನು ಸಾವಯವದ್ರವ್ಯವಲ್ಲ. ಅವನಿಗೆ ಸಂಸಾರದ ಕಿಲುಬು ಹತ್ತಿಕೊಂಡಿದ್ದು ಆಮೇಲೆ ಹೋಗುವದಾದರೆ ಅದರಲ್ಲಿ ಹಾನಿವೃದ್ಧಿಗಳಿಂದ ಕಿರಿಮೆಹಿರಿಮೆಗಳಾಗಬೇಕಾದೀತು, ಆಗ ಅವನೇ ಅನಿತ್ಯನಾದಾನು. ಆದ್ದರಿಂದ ಜೀವನು ಪರಮಾತ್ಮನ ಸಾಮ್ಯವನ್ನು ಮುಕ್ತಿಯಲ್ಲಿ ಪಡೆದುಕೊಳ್ಳುವನೆಂಬುದೂ ಸರಿಯಲ್ಲ. ಮತ್ತೇನೆಂದರೆ ಈಗಲೇ ಇಲ್ಲಿಯೇ ಪ್ರತಿಯೊಬ್ಬ ಜೀವನೂ ಪರಮಾರ್ಥವಾಗಿ ಪರಮೇಶ್ವರಸ್ವರೂಪನಾಗಿಯೇ ಇರುತ್ತಾನೆ. ಆದರೆ ಈ ತತ್ತ್ವವನ್ನು ಅರಿಯಲಾರದೆ ಮಿಥ್ಯಾಜ್ಞಾನದಿಂದ ಸಂಸಾರಿಯು ತಾನೆಂಬ ಮಾಯಾರೂಪಾಭಿಮಾನವನ್ನು ಪಡೆದಿರುತ್ತಾನೆ. ತಪ್ಪುತಿಳಿವಿನಿಂದಲೇ ಸಶರೀರತ್ವವೂ ಸಂಸಾರಿತ್ವವೂ ಆಗಿರುತ್ತದೆ. ಸಾಧನಗಳಿಂದ ಚಿತ್ತಶುದ್ಧಿಯನ್ನು ಹೊಂದಿ ವಿಚಾರಮಾಡಿನೋಡಿದಮಾತ್ರದಿಂದ ತಾನು ಎಂದೆಂದಿಗೂ ಅಸಂಸಾರಿಯಾದ ಅದ್ವಿತೀಯಬ್ರಹ್ಮವೇ ಆಗಿರುತ್ತೇನೆಂಬುದನ್ನು ಕಂಡುಕೊಳ್ಳುತ್ತಾನೆ. ಈಶ್ವರನನ್ನು ಕಂಡುಕೊಂಡಮಾತ್ರದಿಂದ ಪರಮಸಾಮ್ಯವು ದೊರಕುವದೆಂದು ಸಾರುವ ಶ್ರುತಿಯ ಆಶಯವೇ ಇದು.

ಮೇಲೆ ನಾವು ಕೊಟ್ಟಿರುವ ಮಂತ್ರಗಳಲ್ಲಿ ನಾಲ್ಕನೆಯ ಮಂತ್ರದ ಅರ್ಥವನ್ನು ಪರಿಶೀಲಿಸಿದರೆ ಈ ಅಭಿಪ್ರಾಯಕ್ಕೆ ಮತ್ತಷ್ಟು ಹೊಳಪು ಬರುತ್ತದೆ. ಹೇಗೆಂದರೆ ಸರ್ವಭೂತಗಳ ರೂಪದಿಂದಲೂ ಕಾಣುತ್ತಿರುವದು ಈ ಪರಮಾತ್ಮನೇ, ಈತನೇ ನಮ್ಮ ಪ್ರಾಣಗಳಿಗೂ ಪ್ರಾಣವಾಗಿರುವ ಪರಮೇಶ್ವರನು. ಇದನ್ನು ಅರಿತುಕೊಂಡವನು ಅತಿವಾದಿಯಾಗುವದಿಲ್ಲ- ಎಂದು ಈ ಮಂತ್ರದಲ್ಲಿ ಹೇಳಿರುತ್ತದೆ.

ಈ ಪರಮಾತ್ಮನೇ ಎಲ್ಲಾ ಜೀವರ ರೂಪದಿಂದ ತೋರುತ್ತಿರುವನು ಎಂದದ್ದರಿಂದ ನಿಜವಾಗಿರುವವನು ಪರಮಾತ್ಮನೊಬ್ಬನೇ; ತೋರುವದು ಜೀವರೂಪದಿಂದ- ಎಂದಾಗುತ್ತದೆ. ಹೀಗೆಂದು ಅರಿತುಕೊಂಡು ಜ್ಞಾನಿಯು ಅತಿವಾದಿಯಾಗುವದಿಲ್ಲ ಎಂದರೆ ಆ ಜ್ಞಾನಿಯು ಯಾವದನ್ನು ಬಿಟ್ಟು ಮಾತನಾಡುವದಕ್ಕೂ ಆಗಲಾರದು. ಇರುವದೆಲ್ಲ ಬ್ರಹ್ಮವೇ ಎಂಬುದು ತತ್ತ್ವವು; ಆ ತತ್ತ್ವವನ್ನರಿತ ಜ್ಞಾನಿಯು ಯಾವದನ್ನು ಕಂಡರೂ ಅವನಿಗೆ ಅದು ಬ್ರಹ್ಮವೇ ಆಗಿರುತ್ತದೆ. ಅಲ್ಪಜ್ಞರಾದವರಿಗೆ ಇದೊಂದು, ಅದೊಂದು ಎಂಬ ದ್ವೈತದೃಷ್ಟಿಯಿರುವದರಿಂದ ಇದಕ್ಕಿಂತ ಅದು ಹೆಚ್ಚು, ಅದಕ್ಕಿಂತ ಮತ್ತೊಂದು ಹೆಚ್ಚು- ಎಂಬ ತಾರತಮ್ಯದೃಷ್ಟಿಯು ಅವಶ್ಯವಾಗಿ ಉಂಟಾಗುತ್ತದೆ. ಆದ್ದರಿಂದ ಅವರು ಅವಶ್ಯವಾಗಿ ಅತಿವಾದಿಗಳಾಗುವರು. ಆದರೆ ಜ್ಞಾನಿಯು ಸತ್ಯಜ್ಞಾನಾನಂತ ಸ್ವರೂಪವೊಂದೇ ಪರಮಾರ್ಥವೆಂದು ಅರಿತುಕೊಂಡಿರುವದರಿಂದ ''ಇದು ಇಲ್ಲಿಗೆ

ಮುಗಿಯಿತು, ಇನ್ನು ಮತ್ತೊಂದು ಇದಕ್ಕಿಂತ ಮಿಗಿಲಾದದ್ದು ಅಥವಾ ಕೀಳಾದದ್ದು ಮೊದಲಾಗುವದು''–ಎಂಬ ಅತಿವಾದವು ಅವನಲ್ಲಿರುವದಿಲ್ಲ. 'ತಿಳಿದಮಾತ್ರದಿಂದ ಅತಿವಾದಿಯಾಗುವದಿಲ್ಲ'ವೆಂದು ಮಂತ್ರವು ಹೇಳುವದರಿಂದಲೂ ಪರಮಾರ್ಥವಾಗಿ ಪರಮಾತ್ಮನೆಂಬ ಒಂದೇ ವಸ್ತು ಇರುತ್ತದೆ ಎಂಬುದು ಶ್ರುತಿಯ ಅರ್ಥವೆಂದಾಯಿತು.

ಈ ಜ್ಞಾನಿಯು ಆತ್ಮಕ್ರೀಡನಾಗಿರುವನು, ಆತ್ಮರತಿಯಾಗಿರುವನು, ಆತ್ಮಕ್ರಿಯಾವಂತನಾಗಿರುವನು. ಕ್ರೀಡೆಯೆಂದರೇನು? ಹೊರಗಿನ ವಸ್ತುಗಳನ್ನಿಟ್ಟುಕೊಂಡು ಆಡುವದು ಕ್ರೀಡೆಯು. ಕಿಂಚಿಜ್ಜ್ಞರಾದವರು ತಮಗೆ ಬೇಸರಾಗಬಾರದೆಂದು ತಮ್ಮ ಕ್ರೀಡೆಗಾಗಿ ಚೆಂಡು, ಬುಗುರಿ, ಗೋಲಿ, ಗಜ್ಜುಗ, ಹಣ, ಹೊಲ, ಹೆಂಡತಿ, ಮಕ್ಕಳು, ಆನೆ, ಕುದುರೆ, ಗಾಡಿ, ಅಧಿಕಾರ, ವಿದ್ಯೆ, ಕುಲ, ಶೀಲ ಮುಂತಾದ ಹೊರಗಿನ ವಸ್ತುವಿಶೇಷಗಳನ್ನು ಇಟ್ಟುಕೊಂಡು ಕ್ರೀಡಿಸುತ್ತಿರುವರು. ಅವರಿಗೆ ಆ ವಸ್ತುಗಳು ಕ್ರೀಡೋಪಕರಣಗಳಾಗಿ ಮಾತ್ರವೇ ಬೇಕಾಗಿರುವದರಿಂದ ತಮಗೆ ಬೇಸರವಾದರೆ ಅವುಗಳನ್ನು ಬಿಟ್ಟುಬಿಡಬೇಕೆಂದು ಹವಣಿಸುವರು. ಆದರೆ ಕೆಲವು ವೇಳೆಗಳಲ್ಲಿ ಅವನ್ನು ಬಿಡುವದೂ ಅವರಿಂದಾಗುವದಿಲ್ಲ, ತಮಗೆ ಬೇಡವಾದಾಗಲೂ ಆ ವಸ್ತುಗಳು ಅವರನ್ನು ಬಿಡದೆ ಕಾಡುತ್ತಿರುವವು. ಆಗ ಅವರಿಗೆ ಆ ಕ್ರೀಡೋಪರಕರಣಗಳೇ ದುಃಖದ ಸಾಮಗ್ರಿಗಳಾಗುತ್ತಿರುವವು. ಜ್ಞಾನಿಯ ವಿಷಯವು ಹೀಗಲ್ಲ. ಅವನಿಗೆ ಆತ್ಮನೇ ಕ್ರೀಡೆಯ ಉಪಕರಣವು. ತನಗಿಂತ ಬೇರೆಯಾದ ಉಪಕರಣವು ತನಗೆ ಬೇಕಾಗುವದು, ಬೇಡವಾಗುವದು–ಎರಡೂ ಉಂಟು. ಆದರೆ ತನ್ನ ಸ್ವರೂಪವೇ ಆಗಿರುವ ಪರಮಾತ್ಮನು ತನಗೆ ಬೇಡವೆನಿಸುವ ಸಂದರ್ಭವು ಯಾವಾಗಲೂ ಬರಲಾರದು. ಎಲ್ಲವೂ ತನಗಾಗಿ, ಆಟವೆಂಬುದೂ ತನಗಾಗಿ ಬೇಕು. ಆದ್ದರಿಂದ ಆತ್ಮವಸ್ತುವು ಎಂದೆಂದಿಗೂ ಪ್ರೇಮಕ್ಕೆ ಆಸ್ಪದವಾದ ಆನಂದರೂಪವಾಗಿರುತ್ತದೆ. ಜ್ಞಾನಿಯು ಅದರಿಂದಲೇ ಆಡುತ್ತಿರುತ್ತಾನೆ–ಎಂದರೆ ಅವನಿಗೆ ಬೇಸರವಾಗಿ ಮತ್ತೊಂದು ಕ್ರೀಡೆಯ ಉಪಕರಣವು ಬೇಕೆಂಬ ಬಯಕೆಯಿಲ್ಲದೆ ಇರುತ್ತದೆ–ಎಂದರ್ಥ.

ಜ್ಞಾನಿಯು ಆತ್ಮರತಿಯಾಗಿರುತ್ತಾನೆ. ಕೆಲವರು ಹೊರಗಿನ ವಸ್ತುಗಳಿಲ್ಲದಾಗಲೂ ಅವುಗಳನ್ನು ನೆನೆನೆನೆದು ತಮ್ಮೊಳಗೇ ಆನಂದವನ್ನು ಹೊಂದುತ್ತಿರುತ್ತಾರೆ. ಇದಕ್ಕೆ ರತಿಯೆಂದು ಹೆಸರು. ರತಿಯಿಂದ ಸುಖವುಂಟಾಗಬೇಕಾದರೆ ಮನಸ್ಸಿನಲ್ಲಿ ಆ ವಸ್ತುವಿನ ನೆನಪು ಉಳಿಯಬೇಕು. ಎಷ್ಟೋ ಜನರಿಗೆ ತಮಗೆ ಬೇಕಾದ ವಸ್ತುವಿನ ನೆನಪು ಹಲವು ಕಾರಣಗಳಿಂದ ತಪ್ಪಿಹೋಗಿ ದುಃಖವುಂಟಾಗುತ್ತದೆ. ಮನಸ್ಸಿಗೆ ಮರವೆಯುಂಟಾಗ ಬಹುದು; ತಮಗೆ ಬೇಕಿಲ್ಲದ ವಸ್ತುವಿನ ನೆನಪು ತಾನೇ ಎದ್ದುಕೊಳ್ಳಬಹುದು; ಅಥವಾ

ಯಾರಾದರೊಬ್ಬರು ತನಗೆ ಅನಿಷ್ಟವಾದ ವಸ್ತುವನ್ನು ನೆನಪಿಗೆ ತಂದುಕೊಡಲೂ ಬಹುದು. ಆ ಸಂದರ್ಭಗಳಲ್ಲೆಲ್ಲ ಮನಸ್ಸಿನ ರತಿಗೆ ಭಂಗವುಂಟಾಗುತ್ತದೆ. ಆದರೆ ಜ್ಞಾನಿಗೆ ಈ ಅಂಜಿಕೆಯೂ ಇರುವದಿಲ್ಲ. ಏಕೆಂದರೆ ಅವನಿಗೆ ಎಲ್ಲವೂ ಬ್ರಹ್ಮವೇ ಆಗಿಬಿಟ್ಟಿರುತ್ತದೆ. ಆದ್ದರಿಂದ ಅವನು ಯಾವ ವಸ್ತುವನ್ನಾದರೂ ಬ್ರಹ್ಮವನ್ನಾಗಿಯೇ ನೋಡುತ್ತಾ ಅದರೊಡನೆ ಕ್ರೀಡಿಸುತ್ತಿರುವನೆಂದು ಮೇಲೆ ಹೇಳಿರುತ್ತೇವೆ. ಅದರಂತೆ ಅವನ ನೆನಪೂ ಬ್ರಹ್ಮದ ನೆನಪೇ ಆಗಿರುತ್ತದೆ. ಅವನಿಗೆ ಬ್ರಹ್ಮಕ್ಕಿಂತ ಬೇರೆಯಾದ ಅನಿಷ್ಟವಸ್ತುವಿನ ನೆನಪು ಬರುವ ಸಂಭವವೇ ಇಲ್ಲ, ಏಕೆಂದರೆ ಅವನ ದೃಷ್ಟಿಯಲ್ಲಿ ಬ್ರಹ್ಮಕ್ಕಿಂತ ಬೇರೆಯಾದ ವಸ್ತುವೆಂಬುದೇ ಇಲ್ಲ. ಆದ್ದರಿಂದ ಅವನಿಗೆ ಯಾವಾಗಲೂ ಆತ್ಮರತಿಯೇ. ಪರಮಾತ್ಮನ ನೆನಪಿನಿಂದಲೇ ಅವನ ಮನಸ್ಸು ಸುಪ್ರೀತವಾಗಿರುತ್ತದೆ.

ಹೀಗೆಯೇ ಜ್ಞಾನಿಗೆ ಆತ್ಮಕ್ರಿಯೆಯೇ ಕ್ರಿಯೆ. ಆತ್ಮನ ವಿಚಾರ, ಆತ್ಮನ ಧ್ಯಾನ, ಅನಾತ್ಮವಸ್ತುವನ್ನು ತಿರಸ್ಕರಿಸಿ ಎಲ್ಲವನ್ನೂ ಆತ್ಮನನ್ನಾಗಿಯೇ ಕಾಣುವ ವೈರಾಗ್ಯ–ಇವೇ ಅವನ ಕ್ರಿಯೆಗಳು. 'ಆತ್ಮರತಿಕ್ರಿಯಾವಂತನು' ಎಂಬ ಪಾಠವೂ ಒಂದುಂಟು. ಆಗ ಆತ್ಮರತಿಯೊಂದಲ್ಲದೆ ಬೇರೆ ಯಾವ ಕ್ರಿಯೆಯೂ ಇಲ್ಲದ ನಿತ್ಯತೃಪ್ತನು ಎಂದರ್ಥ. ಹೇಗಾದರೂ ಆಗಲಿ, ಜ್ಞಾನಿಯಾದವನಿಗೆ ಕಾಣುವದೆಲ್ಲ ಆತ್ಮನೇ. ಹೊರಗೆ, ಒಳಗೆ, ತಾನು–ಎಲ್ಲವೂ ಒಂದೇ ಅಖಂಡಚಿನ್ಮಾತ್ರೈಕರಸವಾಗಿರುವ ಪರಮಾರ್ಥವೆಂಬುದೇ ಅವನ ನಿಶ್ಚಯವಾಗಿರುತ್ತದೆ. ಪ್ರತಿಯೊಬ್ಬರೂ ತಮ್ಮ ಸಂಸಾರಿಸ್ವರೂಪದ ಕಡೆಗೆ ಕಣ್ಣುಹಾಕದೆ, ಸರ್ವಸಾಕ್ಷಿಯಾಗಿರುವ ಈ ಆತ್ಮಚೈತನ್ಯವನ್ನೇ ಕಂಡುಕೊಳ್ಳಬೇಕು– ಎಂಬುದು ಈ ನಾಲ್ಕು ಮಂತ್ರಗಳ ಸಾರವು.



# 18. ಜ್ಞಾನಕ್ಕೆ ಬೇಕಾದ ಸಾಧನಗಳು

ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ
ಸಮ್ಯಗ್ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಮ್ ।
ಅನ್ತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ
ಯಂ ಪಶ್ಯನ್ತಿ ಯತಯಃ ಕ್ಷೀಣದೋಷಾಃ ॥5॥

ಸತ್ಯಮೇವ ಜಯತೇ ನಾನೃತಂ
ಸತ್ಯೇನ ಪನ್ಥಾ ವಿತತೋ ದೇವಯಾನಃ ।
ಯೇನಾಕ್ರಮನ್ತ್ಯೃಷಯೋ ಹ್ಯಾಪ್ತಕಾಮಾಃ
ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್ ॥6॥

*"ಈ ಆತ್ಮನು ನಿತ್ಯವಾದ ಸತ್ಯದಿಂದ, ತಪಸ್ಸಿನಿಂದ, ಸಮ್ಯಗ್‌ಜ್ಞಾನದಿಂದ, ಬ್ರಹ್ಮಚರ್ಯದಿಂದ ದೊರೆಯುವನು. ಇವನು ಶರೀರದೊಳಗೆ ಬೆಳಕಿನ ಸ್ವರೂಪದಿಂದ ಶುಭ್ರನಾಗಿರುತ್ತಿರುವನು; ಇವನನ್ನು ದೋಷಗಳೆಲ್ಲವೂ ಸವೆದಿರುವ ಯತಿಗಳು ಕಂಡುಕೊಳ್ಳುವರು. ಸತ್ಯವೇ ಗೆಲ್ಲುವದೇ ಹೊರತು ಸುಳ್ಳು ಗೆಲ್ಲುವದಿಲ್ಲ. ಬೇಕಾದದ್ದೆಲ್ಲವನ್ನೂ ಪಡೆದುಕೊಂಡಿರುವ ಋಷಿಗಳು ಆ ಸತ್ಯದ ಪರಮನಿಧಿಯಿರುವೆಡೆಗೆ ಯಾವ (ಮಾರ್ಗ)ದಿಂದ ಹೋಗುತ್ತಾರೋ ಆ ದೇವಯಾನವು ಸತ್ಯದಿಂದಲೇ ಹಬ್ಬಿಕೊಂಡಿರುವದು."*

ಈ ಆತ್ಮನನ್ನು ಕಂಡುಕೊಳ್ಳುವದಕ್ಕೆ ಬೇಕಾದ ಸಹಕಾರಿಸಾಧನಗಳು ಯಾವವು? ಜ್ಞಾನವಾಗುವದಕ್ಕೂ ಅದು ಪರಿಪಕ್ವವಾಗುವದಕ್ಕೂ ಯಾವ ಯಾವ ಸಾಧನವನ್ನು ಕೈಗೊಳ್ಳಬೇಕು–ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ.

ಮೊದಲನೆಯದಾಗಿ ಸತ್ಯವಚನವು ಒಂದು ಮುಖ್ಯಸಾಧನವು. ಯಾವದನ್ನು ಹೇಗೆ ಕಂಡಿರುವೆವೋ ಹಾಗೆಯೇ ನುಡಿಯುವದು–ಸುಳ್ಳನ್ನಾಡದಿರುವದು–ಒಂದು ಹೆಚ್ಚಿನ ಸಾಧನವು. ಪರಮಾತ್ಮನು ಸತ್ಯಸ್ವರೂಪನಾಗಿರುವನು, ಅವನಲ್ಲಿ ಯಾವ ಮಾರ್ಪಾಡೂ ಆಗುವದೇ ಇಲ್ಲ. ನನಗೆ ಸತ್ಯವೇ ಬೇಕು, ನಾನು ಯಾವಾಗಲೂ ಸತ್ಯವನ್ನೇ ಹುಡುಕುವೆನು, ಸತ್ಯವನ್ನೇ ಮನಸ್ಸಿಗೆ ತಂದುಕೊಳ್ಳುವೆನು, ಸತ್ಯವನ್ನೇ ನುಡಿಯುವೆನು–ಎಂದು ಸತ್ಯವನ್ನು ವ್ರತವಾಗಿ ಹಿಡಿಯಬೇಕು. ಅಂಥವರಿಗೆ ಪರಮಾತ್ಮನು ದೊರಕುವನು.

ತಪಸ್ಸು ಎಂಬುದು ಎರಡನೆಯ ಸಾಧನವು. ಇಲ್ಲಿ ತಪಸ್ಸೆಂದರೆ ಕೃಚ್ಛ್ರ, ಚಾಂದ್ರಾಯಣ–ಮುಂತಾದವುಗಳಲ್ಲ. ಅವುಗಳು ವಾನಪ್ರಸ್ಥರೇ ಮುಂತಾದವರಿಗೆ ಸ್ವಲ್ಪಮಟ್ಟಿಗೆ ಪ್ರಯೋಜನವುಂಟುಮಾಡಬಹುದು. ಆದರೆ ಆತ್ಮದರ್ಶನಕ್ಕೆ ಕಾರಣವಾಗಿರುವ ತಪಸ್ಸೆಂದರೆ ಆತ್ಮನ ಕಡೆಗೆ ತಿರುಗುವದಕ್ಕೆ ಬೇಕಾದ ಮನಸ್ಸಿನ ಸಂಸ್ಕಾರವೇ. ಮನಸ್ಸನ್ನೂ ಇಂದ್ರಿಯಗಳನ್ನೂ ವಿಷಯಗಳಿಂದ ಹಿಂತಿರುಗಿಸಿ ಏಕಾಗ್ರವಾಗಿರಿಸಿಕೊಂಡು ಆತ್ಮನನ್ನು ಕಾಣಬೇಕೆಂದು ತವಕಿಸುವದೇ ತಪಸ್ಸು. ಈ ತಪಸ್ಸಿಗೇ ಆತ್ಮನು ಒಲಿಯುತ್ತಾನೆ.

ಇನ್ನು ಬ್ರಹ್ಮಚರ್ಯವೆಂಬುದು ಮೂರನೆಯ ಸಾಧನವು. ಅನಾತ್ಮವಸ್ತುಗಳಲ್ಲಿ ಮನಸ್ಸಿರುವದೇ ಬ್ರಹ್ಮದರ್ಶನಕ್ಕೆ ಪ್ರಬಲವಾದ ಅಡ್ಡಿಯಾಗಿರುತ್ತದೆ. ನಮಗೆ ಬೇಕು ಎನ್ನಿಸುವ ಹೂ, ಗಂಧ ಮೊದಲಾದ ವಸ್ತುಗಳಲ್ಲಿಯೂ, ಸ್ತ್ರೀ, ಧನ–ಮುಂತಾದವುಗಳಲ್ಲಿಯೂ ಮನಸ್ಸು ಹೊಯ್ದಾಡುವದೇ ಕಾಮವು. ಅದರಲ್ಲಿಯೂ ವಿಶೇಷವಾಗಿ ಸ್ತ್ರೀಯರ ನೆನಪು, ಮಾತು, ಅವರೊಡನೆ ಓಡಾಡುವದು–ಮುಂತಾದದ್ದು ಮನುಷ್ಯನನ್ನು ಆತ್ಮದರ್ಶನದಿಂದ ತೀರ ದೂರವಾಗಿ ಕರೆದುಕೊಂಡು ಹೋಗಿ ಗುಂಡಿಗೆ ಕೆಡವಿಬಿಡುತ್ತದೆ. ಆದ್ದರಿಂದ ಶಾಸ್ತ್ರಜ್ಞರು ಹೇಳುವ ಎಂಟು ವಿಧದ ಮೈಥುನದ ಹಂಗೂ ಇಲ್ಲದೆ ವೀರ್ಯವನ್ನು ಕಾಪಾಡಿಕೊಂಡು ಮೇಧಾಶಕ್ತಿಯನ್ನು ಬೆಳೆಸಿಕೊಳ್ಳುತ್ತಾ ಬ್ರಹ್ಮ ಚಿಂತನೆಯಲ್ಲಿಯೇ ಕಾಲವನ್ನು ಹಾಕುವದೆಂಬ ಬ್ರಹ್ಮಚರ್ಯವು ಆತ್ಮದರ್ಶನಕ್ಕೆ ಬಹಳ ಉಪಕಾರಕವಾಗಿರುತ್ತದೆ.

ಹೀಗೆ ಸತ್ಯ, ತಪಸ್ಸು, ಬ್ರಹ್ಮಚರ್ಯೆ–ಇವುಗಳಿಂದ ಕೂಡಿಕೊಂಡು ಸಮ್ಯಗ್ಜ್ಞಾನವನ್ನು ಸಾಧಿಸಬೇಕು. ಇದಕ್ಕೆ ಗೀತೆಯಲ್ಲಿ ಅಧ್ಯಾತ್ಮಜ್ಞಾನನಿತ್ಯತ್ವವೆಂದು ಕರೆದಿರುತ್ತದೆ. ಆತ್ಮನನ್ನು ಬಿಟ್ಟು ಮತ್ತೇತರ ವಿಚಾರವನ್ನು ಮಾಡಿದರೂ ಸಮ್ಯಗ್ಜ್ಞಾನಪರತೆಯೆನಿಸುವದಿಲ್ಲ. ಕಾವ್ಯಶಾಸ್ತ್ರವಿನೋದವೆಂಬುದು ಇತರ ವಿಚಾರಕ್ಕೆ ಹೋಲಿಸಿದರೆ ಸರಿಯಾದ ತಿಳಿವಳಿಕೆಯೆನಿಸಬಹುದಾದರೂ ಆತ್ಮಜ್ಞಾನದ ಕಣ್ಣಿನಿಂದ ನೋಡಿದರೆ ಅದೂ ಮಿಥ್ಯಾಜ್ಞಾನವೇ ಆಗಿರುತ್ತದೆ. ಆದ್ದರಿಂದ ಮಿಕ್ಕ ಏತರ ಚಿಂತೆಯನ್ನೂ ಮನಸ್ಸಿಗೆ ಹತ್ತಿಸಿಕೊಳ್ಳದೆ ಮುಮುಕ್ಷುವಾದವನು ಅಧ್ಯಾತ್ಮಜ್ಞಾನದಲ್ಲಿಯೇ ರತನಾಗಬೇಕು. ಇದರಿಂದಲೇ ಆತ್ಮದರ್ಶನವಾಗುತ್ತದೆ.

ಮೇಲೆ ಹೇಳಿದ ಸಾಧನಗಳನ್ನು ಒಂದು ಸಲ, ಅಥವಾ ದಿನಕ್ಕೆ ಇಷ್ಟು ಹೊತ್ತೆಂದು ಕ್ಲಿಪ್ತಪ್ರಮಾಣದ ಕಾಲದಲ್ಲಿ ಮಾಡಿದರೆ ಸಾಲದು. ಅವನ್ನು ನಿತ್ಯವಾಗಿ ನಡೆಯಿಸುತ್ತಲೇ ಇರಬೇಕು. ತತ್ಪರನಾಗಿ ಜಿತೇಂದ್ರಿಯನಾಗಿ ಶ್ರದ್ಧೆಯಿಂದ ಸತತವೂ ಆತ್ಮನನ್ನು ಹುಡುಕುವವರಿಗೇ ಆತ್ಮದರ್ಶನವಾದೀತು.

ಸತ್ಯ, ತಪಸ್ಸು, ಬ್ರಹ್ಮಚರ್ಯ, ಆತ್ಮವಿಚಾರ–ಎಂದು ನಾವು ಬೇರೆಬೇರೆಯಾಗಿ ನಾಲ್ಕು ಸಾಧನಗಳನ್ನು ಹೇಳಿದ್ದರೂ ಇವುಗಳಲ್ಲಿ ಯಾವದೊಂದನ್ನೂ ಒಂಟಿಯಾಗಿ ಮಾಡುವದು ಆಗುವದಿಲ್ಲವೆಂಬುದನ್ನು ನೆನಪಿಡಬೇಕು. ಸತ್ಯವನ್ನು ವ್ರತವಾಗಿ ಇಟ್ಟುಕೊಂಡರೆ ತಪಸ್ಸಾಗಲಿ ಬ್ರಹ್ಮಚರ್ಯವನ್ನಾಗಲಿ ಆತ್ಮವಿಚಾರವನ್ನಾಗಲಿ ಬಿಡುವದಕ್ಕೆ ಬರುವದಿಲ್ಲ ; ಏಕೆಂದರೆ ಸತ್ಯವು ದಕ್ಕುವದಕ್ಕೆ ಏನೇನು ಮಾಡಬೇಕೋ ಅದೆಲ್ಲವೂ ಸತ್ಯವೇ ಆಗುತ್ತದೆ. ಅದನ್ನೂ ಅವಶ್ಯವಾಗಿ ಅನುಷ್ಠಾನಮಾಡಿಯೇ ತೀರಬೇಕಾಗುತ್ತದೆ. ಹೀಗೆಯೇ ತಪಸ್ಸು, ಬ್ರಹ್ಮಚರ್ಯ–ಮುಂತಾದವನ್ನೂ ತಿಳಿಯಬೇಕು. ಆತ್ಮವಿಚಾರವೆಂದರೆ ಬುದ್ಧಿಯ ಶಕ್ತಿಯಿಂದ ತರ್ಕಮಾಡುವದಲ್ಲವೆಂದೂ ಸತ್ಯ, ತಪಸ್ಸು ಮುಂತಾದವುಗಳ ಬೆಂಬಲದಿಂದ ತನ್ನ ಸ್ವರೂಪವನ್ನೇ ವಿಮರ್ಶಪೂರ್ವಕವಾಗಿ ವಿಚಾರಮಾಡುವದೆಂದೂ ಇದರಿಂದಲೇ ಸಿದ್ಧವಾಗುತ್ತದೆ.

ಆತ್ಮನು ಎಲ್ಲೆಲ್ಲಿಯೂ ತುಂಬಿರುತ್ತಾನಾದರೂ ಆತ್ಮನನ್ನು ನಮ್ಮ ಶರೀರದೊಳಗೇ ಚೈತನ್ಯಜ್ಯೋತಿಯಾಗಿರುವ ಸಾಕ್ಷಿಚೈತನ್ಯರೂಪದಿಂದ ಮೊದಲು ಸಾಕ್ಷಾತ್ಕಾರಮಾಡಿ ಕೊಳ್ಳಬೇಕೆಂದು ಈ ಮೊದಲೇ ಹೇಳಿದ್ದಾಗಿದೆ. ಆತ್ಮನು ಅನಾತ್ಮದ ಕಲ್ಮಷವಿಲ್ಲದೆ ಇರುವ ನೆಂಬುದನ್ನು ಕಾಣಬೇಕಾದರೆ ಕಲ್ಮಷಶರೀರರಾಗಿ ಕಲ್ಮಷಚಿತ್ತರಾಗಿ ರಾಗದ್ವೇಷಗಳಿಂದ ಪ್ರೇರಿತರಾಗಿ ಹೊರಗಿನ ವಿಷಯಗಳ ಕಡೆಗೆ ಎರಗುತ್ತಿರುವವರಿಂದ ಎಂದಿಗೂ ಆಗಲಾರದು. ಸ್ಥೂಲಸೂಕ್ಷ್ಮಶರೀರಗಳ ಸಂಬಂಧದಿಂದಾಗುವ ಕಾಮಕ್ರೋಧಾದಿ ಮಲವನ್ನು ತೊಳೆದುಕೊಂಡಿರುವ ನಿತ್ಯನಿರ್ಮಲರಾದ ಸಾಧಕರಿಗೇ ಈ ಶುದ್ಧಬುದ್ಧಮುಕ್ತಸ್ವಭಾವದ ಆತ್ಮನ ದರ್ಶನವಾಗುತ್ತದೆ. ಆತ್ಮನ ದರ್ಶನವೆಂದರೆ ಕತ್ತಲೆಯಲ್ಲಿ ಹತ್ತಿಸಿದ ದೀಪವು ಗೋಚರವಾಗುವಂತೆ ಥಳಾರನೆ ನಮ್ಮ ಮುಂದೆ ಮಿಂಚುವದೆಂದೇನೂ ಅರ್ಥವಲ್ಲ ; ಆ ಸ್ವರೂಪದ ಆತ್ಮನೇ ನಾವೆಂದು ನಾವೇ ನೇರಾಗಿ ಅನುಭವದಿಂದ ಕಂಡುಕೊಳ್ಳುವದೇ ದರ್ಶನವು. ನಾವು ಸತ್ಯಸ್ವರೂಪನಾದ ಪರಮಾತ್ಮನನ್ನು ನಿತ್ಯವೂ ಸತ್ಯನಿಷ್ಠರಾಗಿಯೇ ಕಂಡುಕೊಳ್ಳಬೇಕಾಗಿರುತ್ತದೆ.

ಸತ್ಯವು ಪರಮಾತ್ಮನ ದರ್ಶನವನ್ನು ಕೊಡುವದೆಂಬುದಕ್ಕೆ ಹೆಚ್ಚಿನ ಪ್ರಮಾಣವನ್ನೇನೂ ನಾವು ಹುಡುಕಬೇಕಾಗಿರುವದಿಲ್ಲ. ಏಕೆಂದರೆ ಲೋಕದಲ್ಲಿ ಸತ್ಯಕ್ಕೆ ಗೆಲುವಾಗುವದು ಕಂಡುಬಂದಿದೆ. ಲೋಕದಲ್ಲಿ ಯಾವನು ಸತ್ಯವಾದಿಯಾಗಿರುವನೋ ಅವನಿಂದ ಅನೃತವಾದಿಗೆ ಪರಾಜಯವಾಗುತ್ತದೆ. ಸುಳ್ಳನ್ನು ಹೇಳಿದವನಿಗೆ ಜಯವು ಎಲ್ಲಿಯವರೆಗೆ? ಅವನು ಹೇಳಿದ ವಿಷಯವನ್ನು ಜನರು ಎಲ್ಲಿಯವರೆಗೆ ತಾವೇ ನೇರಾಗಿ ನೋಡುವದಿಲ್ಲವೋ ಅಲ್ಲಿಯವರೆಗೆ. ದೂರದಲ್ಲಿ ಥಳಗುಟ್ಟುತ್ತಿರುವದೊಂದು ವಸ್ತುವನ್ನು

ಕಂಡು ''ಅದು ಬೆಳ್ಳಿ'' ಎಂದು ಬಗೆಯುವವನೂ 'ಅದು ಬೆಳ್ಳಿ' ಯೆಂದು ಮತ್ತೊಬ್ಬರಿಗೂ ಹೇಳುವವನೂ ತರ್ಕದಲ್ಲಿಕುಶಲನೆಂದು ನಾವು ಸ್ವಲ್ಪಹೊತ್ತುಭಾವಿಸಿರಬಹುದು. ಆದರೆ ಹತ್ತಿರಕ್ಕೆ ಹೋಗಿ ನೋಡಿದರೆ ಅದು ಒಂದು ಕಪ್ಪೆಯ ಚಿಪ್ಪು ಮಾತ್ರವೇ ಎಂದು ಗೊತ್ತಾದಾಗ? ಆ ಬೆಳ್ಳಿಯೆಲ್ಲಿರುತ್ತದೆ? ಅದು ಹಾರಿಹೋಗಿರುತ್ತದೆ. ಅದು ಇರಲೇಇಲ್ಲವೆಂದು ನಮಗೂ, ಅದು ಬೆಳ್ಳಿಯೆಂಬ ಅಭಿಮಾನವನ್ನು ತಳೆದಿದ್ದವನಿಗೂ ಮನಗಂಡುಬಿಡುತ್ತದೆ. ಆಗ ಅವನು ಕಳೆಗುಂದಿ ಸತ್ಯಕ್ಕೇ ಶರಣು ಬರಬೇಕಾಗುತ್ತದೆ. ಅಲ್ಲವೆ? ಇದರಂತೆ ಸತ್ಯವೇ ಬೇಕೆಂದು ಅನೃತವಾದ ಅನಾತ್ಮವನ್ನು ಕೈಬಿಟ್ಟವನಿಗೆ, ಅನಾತ್ಮವೆಲ್ಲವೂ ಅನೃತವೇ, ಅದರಲ್ಲೇನೂ ಹುರುಳಿಲ್ಲ ಎಂದು ಹೇಳುತ್ತಿರುವವನಿಗೆ, ಕೊನೆಯಲ್ಲಿ ಗೆಲುವಾಗುವದು. ವಿಷಯಾಭಿಮಾನಿಗಳೂ ವಿಷಯಗಳೇ ಸ್ಥಿರವೆಂಬ ಬೋಧಕರೂ ಸದ್ಯಕ್ಕೆ ತಲೆಯೆತ್ತಿಕೊಂಡು ಮೆರೆಯುತ್ತಿರಬಹುದು. ಆದರೆ ಕೊನೆಗೆ ಅವರಿಗೂ ತಾವು ಹೇಳಿದ್ದುಸತ್ಯವಲ್ಲ, ಅನೃತವೇ—ಎಂಬುದು ಗೊತ್ತಾಗಿಯೇತೀರಬೇಕು. ಆಗ ಅವರು ''ಅಯ್ಯೋ! ನಾವು ಸತ್ಯವಾದ ಪರಮಾರ್ಥವನ್ನೇಕೆ ಹುಡುಕಲಿಲ್ಲ? ಅನೃತವನ್ನೇ ಏಕೆ ನೆಚ್ಚಿಕೊಂಡಿದ್ದೆವು?'' ಎಂದು ಪೆಚ್ಚುಮೊಗವನ್ನು ಹಾಕಿಕೊಳ್ಳುವರು.

ಶಾಸ್ತ್ರವೂ ಹಾಗೆಂದೇ ಹೇಳುತ್ತದೆ ಸತ್ಯವೆಂಬ ಪರಮನಿಧಿಯು ಬ್ರಹ್ಮಲೋಕದಲ್ಲಿರುತ್ತದೆಯೆಂದೂ ಆ ಲೋಕಕ್ಕೆ ಸತ್ಯಲೋಕವೆಂದೇ ಹೆಸರೆಂದೂ ಶಾಸ್ತ್ರದಲ್ಲಿಸಾರಿರುತ್ತದೆ. ಅದಕ್ಕೆ ದೇವಯಾನವೆಂಬ ಮಾರ್ಗದಿಂದಲೇ ಹೋಗಬೇಕು. ಯಾರಿಗೆ ಸತ್ಯವೇ ಮುಂತಾದ ದೈವಸಂಪತ್ತಿನ ಗುಣಗಳು ಸಹಜವಾಗಿರುವವೋ ಅವರು ಮಾತ್ರವೇ ಅಲ್ಲಿಗೆ ಹೋಗುವರು. ಮೋಸ, ಮಾಯೆ, ಜಿಮುಣತನ, ಅಹಂಕಾರ, ದಂಭ, ಸುಳ್ಳು ಮುಂತಾದ ಆಸುರಸಂಪತ್ತಿನ ಗುಣಗಳಿರುವವರಿಗೆ ಆ ಮಾರ್ಗದಲ್ಲಿ ಪ್ರವೇಶವಿರುವದಿಲ್ಲ, ಯಾವ ಮಿಥ್ಯಾವಸ್ತುವಿನ ಆಸೆಯೂ ಇಲ್ಲದೆ, ನಿತ್ಯತೃಪ್ತರಾಗಿರುವ ಸತ್ಯನಿಷ್ಠರಾದ ಋಷಿಗಳೇ ಆ ಮಾರ್ಗದಿಂದ ಹೋಗುವರು. ಆ ಮಾರ್ಗವೆಲ್ಲವೂ ಸತ್ಯಮಯವಾಗಿಯೇ ಇರುವದು. ಸತ್ಯವನ್ನು ಸಾಧನೆಮಾಡುತ್ತಾಸತ್ಯಮಾರ್ಗದಿಂದಲೇ ಹೋಗಿ ಆ ಸತ್ಯಲೋಕವನ್ನು ಪಡೆಯಬೇಕು. ಅಂಥವರಿಗೇ ಅಲ್ಲಿ ಸತ್ಯನಿಧಿಯಾದ ಪರಮೇಶ್ವರನ ದರ್ಶನವಾಗುವದು—ಎಂದು ಶಾಸ್ತ್ರದಲ್ಲಿದೆ. ಹೀಗೆ ಈ ಲೋಕದ ನಮ್ಮ ಅನುಭವದಿಂದಲೂ ಶಾಸ್ತ್ರದಲ್ಲಿ ಹೇಳಿರುವ ಪ್ರಮಾಣವಚನಗಳಿಂದಲೂ ಸತ್ಯವೇ ಮುಂತಾದ ಸಾಧನಗಳು ಆತ್ಮದರ್ಶನವೆಂಬ ಫಲಕ್ಕೆ ಬೇಕಾಗಿರುವ ಉತ್ತಮಸಾಧನಗಳೆಂದು ನಿಶ್ಚಯವಾಗುತ್ತದೆ.



## 19. ಸತ್ಯಾದಿಗಳಿಂದ ದೊರಕುವ ಆತ್ಮತತ್ತ್ವ

ಬೃಹಚ್ಚ ತದ್ದಿವ್ಯಮಚಿನ್ತ್ಯರೂಪಂ
ಸೂಕ್ಷ್ಮಾಚ್ಚ ತತ್ ಸೂಕ್ಷ್ಮತರಂ ವಿಭಾತಿ ।
ದೂರಾತ್ ಸುದೂರೇ ತದಿಹಾನ್ತಿಕೇ ಚ
ಪಶ್ಯತ್ಸ್ವಿಹೈವ ನಿಹಿತಂ ಗುಹಾಯಾಮ್ ॥7॥

ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ
ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ ।
ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ
ಪಶ್ಯತೇ ನಿಷ್ಕಲಂ ಧ್ಯಾಯಮಾನಃ ॥8॥

ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ
ಯಸ್ಮಿನ್ ಪ್ರಾಣಃ ಪಞ್ಚಧಾ ಸಂವಿವೇಶ ।
ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ
ಯಸ್ಮಿನ್ ವಿಶುದ್ಧೇ ವಿಭವತ್ಯೇಷ ಆತ್ಮಾ ॥9॥

*"ಅದು ದೊಡ್ಡದು, ದಿವ್ಯವಾದದ್ದು, ಅಚಿಂತ್ಯವಾದದ್ದು; ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾದದ್ದು, ದೂರವಾಗಿರುವದಕ್ಕಿಂತ ದೂರದಲ್ಲಿರುವದು, ಹತ್ತಿರವೇ ಇರುವದು. ನೋಡುವವರಿಗೆ ಇಲ್ಲಿಯೇ ಗುಹೆಯಲ್ಲಿ ಅಡಗಿಕೊಂಡಿರುವದು. ಚಕ್ಷುರಿಂದ್ರಿಯಕ್ಕೆ ಸಿಕ್ಕುವದಿಲ್ಲ, ವಾಕ್ಕುಗಳಿಗಾಗಲಿ ಮಿಕ್ಕ ಇಂದ್ರಿಯಗಳಿಗಾಗಲಿ ಸಿಕ್ಕುವದಿಲ್ಲ. ತಪಸ್ಸಿನಿಂದಲಾಗಲಿ ಕರ್ಮದಿಂದಲಾಗಲಿ ದೊರೆಯುವದಿಲ್ಲ. ಜ್ಞಾನಪ್ರಸಾದದಿಂದ ಸತ್ತ್ವವನ್ನು ಶುದ್ಧಿಮಾಡಿಕೊಂಡು ಧ್ಯಾನಮಾಡುವವನು ಆದರಿಂದ ಆ ನಿಷ್ಕಲನನ್ನು ಕಂಡುಕೊಳ್ಳುವನು. ಪ್ರಾಣವು ಎಲ್ಲಿ ಐದು ಬಗೆಯಿಂದ ಸೇರಿಕೊಂಡಿರುವದೋ ಅಲ್ಲಿ ಈ ಅಣುವಾಗಿರುವ ಆತ್ಮನನ್ನು ಚಿತ್ತದಿಂದ ತಿಳಿದುಕೊಳ್ಳಬಹುದು. ಜನರ ಚಿತ್ತವೆಲ್ಲವೂ ಪ್ರಾಣಗಳಿಂದ ವ್ಯಾಪ್ತವಾಗಿರುತ್ತದೆ. ಆ ಚಿತ್ತವು ವಿಶುದ್ಧವಾದರೆ ಈ ಆತ್ಮನು ಹೊರತೋರಿಕೊಳ್ಳುವನು."*

ಸತ್ಯಾದಿಸಾಧನಗಳಿಂದ ದೊರೆಯಬೇಕಾಗಿರುವ ಈ ಆತ್ಮನೇ ಬ್ರಹ್ಮವು. ಬ್ರಹ್ಮವೆಂಬುದು ಎಲ್ಲಕ್ಕಿಂತಲೂ ದೊಡ್ಡದು, ಏಕೆಂದರೆ ಅದು ಎಲ್ಲವನ್ನೂ

ವ್ಯಾಪಿಸಿಕೊಂಡಿರುತ್ತದೆ. ಅದು ದಿವ್ಯವಾದದ್ದು, ಏಕೆಂದರೆ ಇಂದ್ರಿಯಗಳಿಗೆ ಗೋಚರವಾಗಿ ತೋರತಕ್ಕದ್ದಲ್ಲ; ತನ್ನ ಬೆಳಕಿನಿಂದಲೇ ಬೆಳಗುತ್ತಿರುವ ಚೈತನ್ಯಸ್ವರೂಪವು. ಆದ್ದರಿಂದ ಅದನ್ನು ಇಂಥದ್ದು ಅಂಥದ್ದು ಎಂದು ಯಾವ ರೂಪದಿಂದಲೂ ಮನಸ್ಸಿನಿಂದ ಆಲೋಚಿಸಿಕೊಳ್ಳುವದಕ್ಕೆ ಬರುವಹಾಗಿಲ್ಲ; ಅಷ್ಟು ಸೂಕ್ಷ್ಮವಾಗಿರುತ್ತದೆ! ನಾವು ಎಂಥ ಸೂಕ್ಷ್ಮರೂಪವನ್ನು ಮನಸ್ಸಿನಲ್ಲಿ ತಂದುಕೊಂಡರೂ ಅದು ಬ್ರಹ್ಮಕ್ಕಿಂತ ಸ್ಥೂಲವೇ ಆಗಿರುತ್ತದೆ. ಏಕೆಂದರೆ ಕಾರ್ಯಕ್ಕಿಂತ ಕಾರಣವು ಸೂಕ್ಷ್ಮವಾಗಿರುವದೆಂದು ಪ್ರಸಿದ್ಧವಾಗಿರುತ್ತದೆ; ಈ ಬ್ರಹ್ಮವು ಎಲ್ಲಕ್ಕೂ ಕಾರಣವಾಗಿರುವದರಿಂದ ಅತ್ಯಂತಸೂಕ್ಷ್ಮ ವಸ್ತುಗಳಿಗಿಂತಲೂ ಸೂಕ್ಷ್ಮವಾಗಿರುತ್ತದೆ. ಆದರೆ ಅದು ನಮಗೆ ಹೇಗೂ ಕಾಣುವದೇ ಇಲ್ಲವೆಂಬಂತೆಯೂ ಇಲ್ಲ. ಏಕೆಂದರೆ ಸೂರ್ಯ, ಚಂದ್ರ ಮುಂತಾದ ರೂಪಗಳಿಂದ ಬೆಳಗುತ್ತಿರುವದೆಲ್ಲವೂ ಅದರ ರೂಪವೇ; ಆದರೂ ಆ ಸೂರ್ಯಾದಿರೂಪಗಳು ಅದರ ಪರಮಾರ್ಥರೂಪವಲ್ಲ, ಅಷ್ಟೆ. ಒಂದೇ ಮಾತಿನಿಂದ ಹೇಳಬೇಕಾದರೆ ಅಜ್ಞಾನಿಗಳಿಗೆ ಅದು ಅತ್ಯಂತವಾಗಿ ಅಗೋಚರವಾಗಿರುವದರಿಂದ ಅದು ಎಷ್ಟೇ ದೂರದಲ್ಲಿರುವ ದಾದರೂ ಪ್ರಾಣಿಗಳಲ್ಲಿರುವ ಬುದ್ಧಿಯೆಂಬ ಗುಹೆಯಲ್ಲಿ ತೀರಹತ್ತಿರವೇ ಇರುವ ಆತ್ಮನಾಗಿರುವದರಿಂದ ನಿಜವಾಗಿ ಅದರಷ್ಟು ಹತ್ತಿರವಿರುವದೆಂಬ ವಸ್ತುವೇ ಇಲ್ಲ. ಇಂಥ ಪರಮಾತ್ಮವಸ್ತುವನ್ನೇ ಅಜ್ಞರು ಅದು ತಮ್ಮ ರೂಪದಿಂದಲೇ ಇರುವದೆಂಬುದನ್ನು ಅರಿತುಕೊಳ್ಳಲಾರದೆ ತಡಕಾಡುತ್ತಿರುವರು!

ಅವರಿಗೆ ಅದು ಸಿಕ್ಕದಿರುವದಕ್ಕೆ ಕಾರಣವೇನೆಂದರೆ ಅವರು ಇಂದ್ರಿಯಗಳಿಂದ ಅದನ್ನು ಅರಿಯುವದಕ್ಕೆ ಹವಣಿಸುತ್ತಿರುತ್ತಾರೆ. ಆದರೆ ಅದರಲ್ಲಿ ಕಣ್ಣಿಗೆ ಕಾಣುವ ರೂಪವಿಲ್ಲ, ವಾಕ್ಕಿನಿಂದ ಹೇಳಬಹುದಾದ ಜಾತಿದ್ರವ್ಯಾದಿಸ್ವರೂಪವೂ ಇಲ್ಲ. ಹೆಚ್ಚೇಕೆ? ಯಾವ ಇಂದ್ರಿಯಕ್ಕೂ ವಿಷಯವಾಗುವಂಥ ಧರ್ಮವು ಅದರಲ್ಲಿ ಇಲ್ಲವೇ ಇಲ್ಲ. ತಪಸ್ಸಿನಿಂದ ಅತ್ಯಂತ ಆಶ್ಚರ್ಯಕರವಾದ ಸಿದ್ಧಿಗಳು ಕೈಗೂಡುವವೆಂದೂ ಅಗ್ನಿಹೋತ್ರವೇ ಮುಂತಾದ ಕರ್ಮಗಳಿಂದ ಸ್ವರ್ಗವೇ ವಶವಾಗುವದೆಂದೂ ಬಲ್ಲವರು ಹೇಳುವರಷ್ಟೆ. ಅಂಥ ತಪಸ್ಸಿನಿಂದಲಾಗಲಿ ಕರ್ಮದಿಂದಲಾಗಲಿ ಆತ್ಮವಸ್ತುವನ್ನು ಪಡೆಯುವದಕ್ಕೆ ಎಂದಿಗೂ ಆಗಲಾರದು. ಅದನ್ನು ಪಡೆದುಕೊಳ್ಳುವದಕ್ಕೆ ಒಂದೇ ಒಂದು ಉಪಾಯವಿರುವದು; ನಮ್ಮ ತಿಳಿವಳಿಕೆಯನ್ನು ಶುದ್ಧಿಗೊಳಿಸಿಕೊಂಡು ನಮ್ಮಲ್ಲಿಯೇ ಆಲೋಚಿಸಿ ಅದನ್ನು ಕಂಡುಕೊಳ್ಳಬೇಕು. ಈಗಿನ ಸ್ಥಿತಿಯಲ್ಲಿ ನಮ್ಮ ಮನಸ್ಸು ವಿಷಯಗಳ ಚಿಂತನೆಯಿಂದ ಅತ್ಯಂತಕೊಳೆಯಾಗಿರುತ್ತದೆ. ಆ ವಿಷಯವಾಸನೆಗಳನ್ನೆಲ್ಲ ತೊಳೆದುಕೊಂಡು ಜ್ಞಾನವನ್ನು ತಿಳಿಮಾಡಿಕೊಂಡರೆ ನಮ್ಮ ಅಂತಃಕರಣವು

ಶುದ್ಧವಾಗುತ್ತದೆ. ಸತ್ಯಾದಿಗಳ ಸಹಾಯದಿಂದ ಏಕಾಗ್ರಚಿತ್ತವನ್ನು ಸಂಪಾದಿಸಿಕೊಂಡು ನಮ್ಮಲ್ಲಿಯೇ ನಾವು ಧ್ಯಾನಮಾಡಿ ನೋಡಿದರೆ ನಿರವಯವನಾಗಿ ಅತ್ಯಂತ ಸೂಕ್ಷ್ಮವಾಗಿದ್ದರೂ ನಮ್ಮ ಸ್ವರೂಪವೇ ಆಗಿರುವದರಿಂದ ಆತ್ಮನನ್ನು ನಾವು ಕಂಡುಕೊಳ್ಳಬಹುದು.

ಅಂತೂ ಈ ಆತ್ಮನನ್ನು ಪ್ರಾಣಾಪಾನಾದಿಗಳಿಂದ ಪ್ರಾಣವಾಯುವು ಕೆಲಸಮಾಡುತ್ತಿರುವ ಈ ಶರೀರದಲ್ಲಿಯೇ ಕಂಡುಕೊಳ್ಳಬೇಕು. ಅವನನ್ನು ನಮ್ಮ ಚಿತ್ತದಿಂದಲೇ ಕಂಡುಕೊಳ್ಳಬೇಕು. ಈ ನಮ್ಮ ಚಿತ್ತದಲ್ಲಿಯೂ ಇಂದ್ರಿಯಗಳಲ್ಲಿಯೂ ಆತ್ಮನ ಚೈತನ್ಯವು ಹಾಲಿನಲ್ಲಿ ಜಿಡ್ಡು ತುಂಬಿಕೊಂಡಿರುವಂತೆ ಎಲ್ಲೆಲ್ಲಿಯೂ ತುಂಬಿ ಕೊಂಡಿರುತ್ತದೆ. ಚಿತ್ತವು ಶುದ್ಧವಾಯಿತೆಂದರೆ ಸಾಕು, ಕೂಡಲೆ ಆತ್ಮನು ಅದರಲ್ಲಿಯೇ ಕಾಣಿಸಿಕೊಳ್ಳುವನು.



## 20. ಆತ್ಮಜ್ಞಾನಿಯ ಮಹಿಮೆ

ಯಂ ಯಂ ಲೋಕಂ ಮನಸಾ ಸಂವಿಭಾತಿ
ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।
ತಂ ತಂ ಲೋಕಂ ಜಯತೇ ತಾಂಶ್ಚ
ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ ಭೂತಿಕಾಮಃ ॥10॥

(ಎರಡನೆಯ ಖಂಡ)

ಸ ವೇದೈತತ್ ಪರಮಂ ಬ್ರಹ್ಮ ಧಾಮ
ಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಮ್ ।
ಉಪಾಸತೇ ಪುರುಷಂ ಯೇ ಹ್ಯಕಾಮಾಸ್ತೇ
ಶುಕ್ರಮೇತದತಿವರ್ತನ್ತಿ ಧೀರಾಃ ॥1॥

*"ವಿಶುದ್ಧಸತ್ತ್ವನಾದವನು ಯಾವ ಯಾವ ಲೋಕವನ್ನು ಮನಸ್ಸಿನಲ್ಲಿ ಚಿಂತಿಸಿಕೊಳ್ಳುವನೋ, ಯಾವ ಯಾವ ಕಾಮಗಳನ್ನು ಮನದಂದುಕೊಳ್ಳುವನೋ ಆಯಾ ಲೋಕವನ್ನು ಮತ್ತು ಆಯಾ ಕಾಮಗಳನ್ನು ಗೆದ್ದುಕೊಳ್ಳುವನು. ಆದ್ದರಿಂದ ಶ್ರೇಯಸ್ಕಾಮಿಯಾದವನು ಆತ್ಮಜ್ಞಾನಿಯನ್ನು ಅರ್ಚಿಸಬೇಕು. ಯಾವದರಲ್ಲಿ ಎಲ್ಲವೂ ಇದ್ದುಕೊಂಡಿರುವದೋ, ಯಾವದು ಶುದ್ಧವಾಗಿ ಥಳಗುಟ್ಟುತ್ತಿರುವದೋ ಅಂಥ ಈ ಬ್ರಹ್ಮವನ್ನು ಆತನು ಬಲ್ಲವನು. ಆ ಪುರುಷನನ್ನು ನಿಷ್ಕಾಮರಾಗಿ ಸೇವಿಸುವವರು ಈ ಶುಕ್ರವನ್ನು ಮೀರುವರು."*

ಚಿತ್ತಶುದ್ಧಿಯಾದ ಒಡನೆಯೇ ಆತ್ಮನೇ ಮೈದೋರುವನೆಂದು ಹಿಂದೆ ತಿಳಿಸಲಾಯಿತು. ಈ ಆತ್ಮನನ್ನು ಜ್ಞಾನದಿಂದ ಅರಿತುಕೊಂಡದ್ದರಿಂದ ಆಗುವ ಫಲವೇನು?–ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವಾಗಿ "ಅವನಿಗೆ ಆಗದೆ ಇರುವ ಫಲವು ಯಾವದು?" ಎಂಬ ಪ್ರಶ್ನೆಯನ್ನು ಹಾಕಬೇಕಾಗುತ್ತದೆ. ಏಕೆಂದರೆ ಜ್ಞಾನಿಗೆ ತನಗಿಂತ ಬೇರೆಯಾಗಿದ್ದು ಇನ್ನೂ ಪಡೆಯಬೇಕಾಗಿರುವ ಫಲವೆಂಬುದೇ ಉಳಿದಿರುವದಿಲ್ಲ. ಎಲ್ಲಕ್ಕೂ ಅವನು ಆತ್ಮನಾಗಿರುವದರಿಂದ ಅವನು ಆಪ್ತಕಾಮನಾಗಿರುತ್ತಾನೆ.

ಜ್ಞಾನಿಯು ಕೃತಕೃತ್ಯನೆಂಬುದನ್ನು ನಮ್ಮಂಥವರು ಮನಗಾಣುವದಕ್ಕೆ ಒಂದು ಮಾರ್ಗವುಂಟು. ಅದೇನೆಂದರೆ : ಆತನನ್ನು ಸಕಾಮರಾದ ನಾವುಗಳು ಭಕ್ತಿಭಾವದಿಂದ

ಪೂಜಿಸಿದರೆ,–ಆತನ ಕಾಲುತೊಳೆಯುವದು, ಆತನಿಗೆ ಸ್ನಾನ ಭೋಜನ ಪಾನಾದ್ಯುಪಚಾರಗಳನ್ನು ಮಾಡುವದು, ನಮಸ್ಕರಿಸುವದು, ಸೇವೆ ಮಾಡುವದು– ಹೀಗೆ ಆತನಿಗೆ ಗೌರವವನ್ನು ತೋರಿಸಿದಮಾತ್ರದಿಂದ– ಆತನ ಮನಸ್ಸು ಪ್ರಸನ್ನವಾಗುವದು. ಆಗ ಆತನು ಮನಸ್ಸಿನಲ್ಲಿ ಯಾವ ಲೋಕವನ್ನು ಚಿಂತಿಸಿಕೊಂಡರೂ ಯಾವ ಭೋಗವನ್ನು ಚಿಂತಿಸಿಕೊಂಡರೂ ಅದು ನಮಗೆ ಉಂಟಾಗಿಬಿಡುತ್ತದೆ. ಜ್ಞಾನಿಯು ಕೃತಕೃತ್ಯನಾಗಿರುವದರಿಂದ ಅವನ ಮನಸ್ಸಿನಲ್ಲಿ ಯಾವದೊಂದರ ಬಯಕೆಯೂ ಇರುವದೇ ಇಲ್ಲ. ಆದರೆ ತನ್ನನ್ನು ಶರಣು ಹೊಕ್ಕ ಕಾಮಿಗಳ ಮೇಲಿನ ಕರುಣೆಯಿಂದ ಇವರ ಇಷ್ಟಾರ್ಥವು ನೆರವೇರಲಿ!–ಎಂದು ಆತನು ಸಂಕಲ್ಪಿಸಿಕೊಂಡರೆ ಸಾಕು, ಅಷ್ಟುಮಾತ್ರದಿಂದ ಅವರ ಕಾಮಗಳು ಪರಿಪೂರ್ಣವಾಗುವುವು! ಆದ್ದರಿಂದ ಜ್ಞಾನಿಯನ್ನು ಪರಮೇಶ್ವರನಿಗಿಂತ ಬೇರೆಯಲ್ಲವೆಂದೇ ಭಾವಿಸಬೇಕು.

ಆದರೆ ಜ್ಞಾನಿಯಾದವನ ಹಿರಿಮೆಯನ್ನು ಇಷ್ಟು ಅಲ್ಪವಾದ ಫಲದಿಂದ ಅಳೆಯುವದು ಸರಿಯಲ್ಲ. ಏಕೆಂದರೆ ಆತನು ಇಡಿಯ ವಿಶ್ವಕ್ಕೇ ಆಧಾರವಾಗಿರುವ ಬ್ರಹ್ಮವೆಂಬ ಪರಮಧಾಮವನ್ನು ಸಾಕ್ಷಾತ್ಕಾರಮಾಡಿಕೊಂಡುಬಿಟ್ಟಿರುತ್ತಾನೆ. ಜ್ಞಾನಿಯು ಆ ಸ್ವಯಂಜ್ಯೋತಿಯಾದ ಪರಮೇಶ್ವರನ ಆತ್ಮನೇ ಆಗಿರುತ್ತಾನೆ. ಆದ್ದರಿಂದ ಬೇಡಿದ ವರವನ್ನೆಲ್ಲ ಕೊಡಬಲ್ಲ ಪರಮೇಶ್ವರನಲ್ಲಿ ಹೇಗೆ ಅಲ್ಪವಾದ ಐಹಿಕಫಲಗಳನ್ನು ಬೇಡುವದು ಸರಿಯಲ್ಲವೋ ಹಾಗೆ ಜ್ಞಾನಿಯನ್ನು ಪ್ರತಿಫಲಾಪೇಕ್ಷೆಯಿಂದ ಸೇವಿಸುವದೂ ಸರಿಯಲ್ಲ. ಜ್ಞಾನಿಯ ಸೇವೆಯಿಂದ ಪಡೆಯಬಹುದಾದ ಅತ್ಯಂತ ಉತ್ತಮವಾದ ಫಲವೊಂದಿದೆ. ಅದೇನೆಂದರೆ : ಜನನಮರಣರಹಿತವಾದ ಅವನ ಆತ್ಮನೇ ಆಗಿರುವ ಪರಬ್ರಹ್ಮಪ್ರಾಪ್ತಿಯು. ಮನುಷ್ಯನು ಶುಕ್ಲಶೋಣಿತಸಂಯೋಗದಿಂದ ಮತ್ತೆ ಮತ್ತೆ ಸ್ತ್ರೀಗರ್ಭವನ್ನು ಹೊಕ್ಕು ಗರ್ಭವಾಸದುಃಖವನ್ನೂ ಸಂಸಾರದುಃಖವನ್ನೂ ಅನುಭವಿಸುತ್ತಿರುವದಕ್ಕೆ ಅವನ ಕಾಮವೇ ಮುಖ್ಯವಾದ ಕಾರಣವಾಗಿರುತ್ತದೆ. ಆ ಕಾಮವನ್ನು ದಾಟಿ ಮುಮುಕ್ಷುವಾಗಿ ಆತ್ಮಜ್ಞಾನಿಯಾದ ಸದ್ಗುರುವನ್ನು ಶರಣುಹೊಂದಿದರೆ ಅವನಿಗೆ ಮತ್ತೆ ಈ ದುಃಖಮಯವಾದ ಜನ್ಮವಿರುವದಿಲ್ಲ. ಅಜವೂ ಅಜರವೂ ಅಮರವೂ ಆದ ಪರಬ್ರಹ್ಮಸ್ವರೂಪವೇ ಅವನದಾಗಿಬಿಡುವದು! ಇದೀಗ ಜ್ಞಾನಿಯಿಂದ ನಾವು ಪಡೆದುಕೊಳ್ಳಬಹುದಾದ ಪರಮಫಲವು. ಇದನ್ನು ಅನುಗ್ರಹಿಸುವ ಶಕ್ತಿಯುಳ್ಳವನಾಗಿರುವದೇ ಆತನ ಮಹಿಮೆಯು.

ಅನಂತವಾದ ಸಮತಾನಂದವೇ ಬ್ರಹ್ಮವು. ಅದನ್ನು ಯಾವ ಶಾಸ್ತ್ರಸಾಧುಗಳಿಂದ ಮಾತ್ರವೇ ದೊರಕಿಸಿಕೊಳ್ಳಬಹುದೋ ಅಂಥ ಶಾಸ್ತ್ರ, ಸಾಧುಗಳ ಸೇವೆಯಲ್ಲಿಯೇ ನಾವು ನಿರತರಾಗಿರಬೇಕು– ಎಂದು ದೊಡ್ಡವರು ಉಪದೇಶಿಸುತ್ತಾರೆ.



## 21. ಪರಮಪುರುಷಾರ್ಥಕ್ಕೆ ಮುಖ್ಯಸಾಧನವು

ಕಾಮಾನ್ ಯಃ ಕಾಮಯತೇ ಮನ್ಯಮಾನಃ।
ಸ ಕಾಮಭಿರ್ಜಾಯತೇ ತತ್ರ ತತ್ರ।
ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು
ಇಹೈವ ಸರ್ವೇ ಪ್ರವಿಲೀಯನ್ತಿ ಕಾಮಾಃ ॥2॥

ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ।
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ
ಆತ್ಮಾ ವಿವೃಣತೇ ತನುಂ ಸ್ವಾಮ್ ॥3॥

ನಾಯಮಾತ್ಮಾ ಬಲಹೀನೇನ ಲಭ್ಯೋ
ನ ಚ ಪ್ರಮಾದಾತ್ತಪಸೋ ವಾಪ್ಯಲಿಙ್ಗಾತ್।
ಏತೈರುಪಾಯೈರ್ಯತತೇ ಯಸ್ತು ವಿದ್ವಾಂಸ್ತಸ್ಯೈಷ
ಆತ್ಮಾ ವಿಶತೇ ಬ್ರಹ್ಮಧಾಮ ॥4॥

*"ವಿಷಯಗಳನ್ನೇ ಮನಸ್ಸಿಗೆ ತಂದುಕೊಂಡು ಯಾವನು ಅವುಗಳನ್ನೇ ಬಯಸುತ್ತಿರುವನೋ ಅವನು ಆ ಕಾಮಗಳೊಡನೆ ಅಲ್ಲಲ್ಲಿ ಹುಟ್ಟುತ್ತಿರುವನು. ಆದರೆ ಯಾವನು ಕಾಮಗಳನ್ನೆಲ್ಲ ಪಡೆದುಕೊಂಡು ಕೃತಾತ್ಮನಾಗಿರವನೋ ಅವನಿಗೆ ಕಾಮಗಳೆಲ್ಲವೂ ಇಲ್ಲಿಯೇ ಅಡಗಿಹೋಗುವವು. ಈ ಆತ್ಮನನ್ನು ಪ್ರವಚನದಿಂದ, ಮೇಧೆಯಿಂದ ಅಥವಾ ಬಹಳವಾಗಿ ಶ್ರವಣಮಾಡುವದರಿಂದ ಪಡೆಯುವದಕ್ಕಾಗಲಾರದು. ಇವನೇ ಬೇಕೆಂದು ಈ ಸಾಧಕನು ಬಯಸುತ್ತಿದ್ದರೆ ಅದರಿಂದ ಪಡೆದುಕೊಳ್ಳಬಹುದು. ಅಂಥವನಿಗೆ ಈ ಆತ್ಮನು ತನ್ನ ಶರೀರವನ್ನು ಬಿಚ್ಚಿ ತೋರಿಸುವನು. ಈ ಆತ್ಮನು ಬಲಹೀನನಾದವನಿಗೆ ದೊರಕಲಾರನು; ಪ್ರಮಾದದಿಂದಲಾಗಲಿ, ಲಿಂಗವಿಲ್ಲದ ತಪಸ್ಸಿನಿಂದಲಾಗಲಿ ದೊರಕಲಾರನು. ಆದರೆ ಯಾವ ವಿವೇಕಿಯು ಈ ಉಪಾಯಗಳಿಂದ ಪ್ರಯತ್ನಮಾಡುತ್ತಿರುವನೋ ಅವನ ಈ ಆತ್ಮನು ಬ್ರಹ್ಮಧಾಮವನ್ನು ಹೊಗುವನು."*

ಯಾವ ಸಾಧನವೇ ಆಗಲಿ, ಕಾರ್ಯಕಾರಿಯಾಗುವದಕ್ಕೆ ಮುಖ್ಯವಾಗಿ ಒಂದು ಇದ್ದೇ ಇರಬೇಕು. ಅದೇನೆಂದರೆ ನಮಗೆ ಯಾವ ಫಲವಾಗಬೇಕೋ ಅದರಲ್ಲಿ ನಮಗೆ ಬಲವಾದ ಆಸೆ ಇರಬೇಕು, ಅದಕ್ಕೆ ವಿರುದ್ಧವಾದ ಯಾವದನ್ನೂ ನಾವು ಕಣ್ಣೆತ್ತಿ ನೋಡಬಾರದು. ಆದ್ದರಿಂದ ನಾವು ಈ ಸಂಸಾರದುಃಖದಿಂದ ಬಿಡುಗಡೆಯನ್ನು ಹೊಂದಿ ಆನಂದರೂಪವಾದ ಪರಮಬ್ರಹ್ಮದಲ್ಲಿಯೇ ನೆಲೆನಿಲ್ಲಬೇಕೆಂಬ ಅಭಿಪ್ರಾಯವಿರುವವರು ಮೊಟ್ಟಮೊದಲು ಸಾಧಿಸಿಕೊಳ್ಳಬೇಕಾದ ಸಾಧನವೆಂದರೆ ಮುಮುಕ್ಷುತ್ವವು. ಇಂದ್ರಿಯಾರ್ಥಗಳ ಭೋಗಗಳಿಂದ ತೃಪ್ತಿಯನ್ನು ಹೊಂದುವ ಯಾವನೊಬ್ಬನಿಗೂ ಮುಕ್ತಿಯು ದೊರಕದು. ಏಕೆಂದರೆ ಇಂದ್ರಿಯಗಳ ಸಂಗದಿಂದ ಮನುಷ್ಯನಿಗೆ ವಿಷಯಗಳ ವಾಸನೆಯು ಮನಸ್ಸಿನಲ್ಲಿ ಬೇರೂರಿಕೊಳ್ಳುವದು. ಅಂಥವನು ವಿಷಯಗಳನ್ನೇ ಹಂಬಲಿಸಿಕೊಳ್ಳುತ್ತಾ ಜೇಡರಹುಳುವಿನಂತೆ ಕಾಮಗಳ ಒಂದು ಬಲೆಯನ್ನು ಏರ್ಪಡಿಸಿಕೊಂಡು ಅದರೊಳಗೆ ಸಿಕ್ಕಿಕೊಳ್ಳುತ್ತಾನೆ. ಕಾಮಗಳು ತಮ್ಮ ವಿಷಯದ ಕಡೆಗೇ ಅವನನ್ನು ಬೇಡವೆಂದರೂ ಎಳೆದೊಯ್ಯುತ್ತವೆ. ಸಂಸಾರಿಗಳು ಬೇರೆಬೇರೆಯ ಜನ್ಮಗಳನ್ನು ಪಡೆಯುತ್ತಿರುವದು ಈ ಅನಂತಕಾಮಗಳ ಪೂರ್ತಿಗಾಗಿಯೇ. ಒಂದು ಕಾಮವು ಈಡೇರುವ ಹೊತ್ತಿಗೆ ಮತ್ತೊಂದು ಮೊಳೆತುಕೊಳ್ಳುತ್ತಿರುವದು, ಅದಕ್ಕಾಗಿ ಬೇಕಾದ ಕರ್ಮಗಳನ್ನು ಮಾಡಿ ಆ ಕರ್ಮಗಳ ಫಲವು ಇರುವೆಡೆಗೆ ಹೋಗಿ ಶರೀರವನ್ನು ಧಾರಣೆಮಾಡಲೇಬೇಕಾಗುತ್ತದೆ. ಆದ್ದರಿಂದ ಈ ಸಂಸಾರಬಂಧವೆಂದರೆ ಕಾಮಬಂಧವೇ ಹೊರತು ಬೇರೆಯಲ್ಲ.

ಯಾವನಿಗೆ ಈ ಕಾಮಗಳ ಕೋಟಲೆಯನ್ನು ತಪ್ಪಿಸಿಕೊಳ್ಳಬೇಕೆಂಬ ದೃಢವಾದ ನಿಶ್ಚಯವುಂಟಾಗಿರುವದೋ ಅವನು ವಿಷಯಗಳಿಂದ ಹಿಮ್ಮೆಟ್ಟುತ್ತಾನೆ. ಇದೇ ವೈರಾಗ್ಯವು. ಆದರೆ ಕಾಮಗಳನ್ನು ಸುಮ್ಮನೆ ಬಿಟ್ಟುಬಿಟ್ಟರೆ ಅವು ನಮ್ಮನ್ನು ಬಿಡುವದಿಲ್ಲ. ಮನುಷ್ಯನು ಆಪ್ತಕಾಮನಾಗಿಯೇ ಕೃತಕೃತ್ಯನಾಗಬೇಕೆಂಬ ಈಶ್ವರಸಂಕಲ್ಪವೊಂದಿರುತ್ತದೆ. ಹೊರಮುಖವಾಗಿರುವವನಿಗೆ ಎಲ್ಲಾ ಕಾಮಗಳನ್ನೂ ಪಡೆದುಕೊಳ್ಳುವದೆಂಬುದು ಅಸಾಧ್ಯವು. ಆದ್ದರಿಂದ ಬಹಿರ್ಮುಖರಾದವರು ಕಾಮಗಳನ್ನು ಪಡೆಯುವದಕ್ಕಾಗಿ ತೊಳಲುತ್ತಲೇ ಇರಬೇಕಾಗಿದೆ. ಆದರೆ ಆತ್ಮಜ್ಞಾನದಿಂದ ಸಕಲಕಾಮಗಳ ಗುರಿಯಾದ ಪರಮಾನಂದವನ್ನು ಎಂದಿಗೆ ಮನುಷ್ಯನು ಪಡೆದುಕೊಳ್ಳುವನೋ ಆಗ ಅವನಿಗೆ ಎಲ್ಲಾ ಕಾಮಗಳೂ ಏಕಕಾಲಕ್ಕೆ ದೊರೆತಂತೆ ಆಗಿಬಿಡುತ್ತದೆ. ಕಾಮಗಳುಂಟಾಗುವದು ನಿಜವಾಗಿ ವಿಷಯ ಪ್ರಾಪ್ತಿಗಾಗಿ ಅಲ್ಲ, ಅವುಗಳಿಂದಾಗುವ ಸುಖಕ್ಕಾಗಿ. ಆದರೆ ಆ ಸುಖವು ಕ್ಷಣಿಕವಾಗಿರುವದರಿಂದ ಮತ್ತೆ ಕಾಮವು ತಲೆಯೆತ್ತಿಕೊಳ್ಳುತ್ತದೆ. ಯಾವಾಗ ನಿತ್ಯಪ್ರಾಪ್ತವೇ

ಆಗಿರುವ ಆತ್ಮಾನಂದವೇ ಎಲ್ಲಾ ಸುಖಗಳ ಬುಗ್ಗೆ ಎಂಬುದನ್ನು ಜೀವನು ಕಂಡುಕೊಳ್ಳುವನೋ, ಎಲ್ಲಾ ಸುಖಗಳೂ ಆತ್ಮಾನಂದಸಾಗರದ ತುಂತುರುಹನಿಗಳೇ ಎಂದು ಯಾವಾಗ ಅವನಿಗೆ ಮನದಟ್ಟಾಗುವದೋ, ಆಗ ಅವನು ಆತ್ಮನ ಕಡೆಗೇ ಓಡಿಬರುವನು. ಆತ್ಮಪ್ರಾಪ್ತಿಯಿಂದ ಅವನಿಗೆ ಸಕಲ ಕಾಮಫಲಗಳೂ ಪ್ರಾಪ್ತವಾಗಿ ಬಿಡುವವು. ಆದ್ದರಿಂದ ಕಾಮಗಳೆಲ್ಲವೂ ಅವನಿಗೆ ಇಲ್ಲಿಯೇ, ಈ ಜನ್ಮದಲ್ಲಿಯೇ ಅಡಗಿಹೋಗಿಬಿಡುವವು. ಅವೆಲ್ಲವೂ ಅವನ ಆತ್ಮನಾದ ಬ್ರಹ್ಮಸ್ವರೂಪವೇ ಆಗಿಬಿಡುತ್ತವೆ!

ಆದ್ದರಿಂದ ಮನುಷ್ಯನು ಆನಂದಘನವಾದ ಈ ಬ್ರಹ್ಮಸ್ವರೂಪವನ್ನು ಪಡೆದುಕೊಳ್ಳುವದಕ್ಕಾಗಿ ಹೇರಳವಾದ ವೇದಾಂತಶ್ರವಣವನ್ನು ಮಾಡಲೇಬೇಕಾಗಿಲ್ಲ. ಶ್ರವಣಮಾಡಿದ ವೇದವಚನಗಳನ್ನೆಲ್ಲ ನೆನಪಿನಲ್ಲಿಟ್ಟುಕೊಂಡು ಮೇಧಾಶಕ್ತಿಗೆ ಹೊರೆಯನ್ನು ಮಾಡಿಕೊಳ್ಳಬೇಕಾದದ್ದೂ ಇಲ್ಲ. ಆ ವಚನಗಳ ಅರ್ಥವನ್ನು ನಿಗಮನಿರುಕ್ತಾದಿಗಳಿಂದ ತಿಳಿದುಕೊಂಡು ಮತ್ತೊಬ್ಬರಿಗೆ ಪ್ರವಚನಮಾಡಬೇಕಾದದ್ದು ಮೊದಲೇ ಇಲ್ಲ. ಶ್ರವಣ, ಗ್ರಂಥಧಾರಣ, ಅರ್ಥಪ್ರವಚನ–ಇವುಗಳಿಂದ ಯಾವ ಪ್ರಯೋಜನವೂ ಇಲ್ಲವೆಂದೇನೂ ಅಭಿಪ್ರಾಯವಲ್ಲ. ಅದರೆ ಇಷ್ಟುಮಾತ್ರದಿಂದ ನಮ್ಮಲ್ಲಿರುವ ಆನಂದವನ್ನು ನಾವು ಎಂದಿಗೂ ಕಂಡುಕೊಳ್ಳಲಾರೆವೆಂಬುದು ಸ್ಪಷ್ಟವಾಗಿದೆ. ವೇದವಚನಗಳೆಲ್ಲವೂ ನಮ್ಮ ಆತ್ಮನ ಸ್ವರೂಪವನ್ನು ನೆನಪುಮಾಡಿಕೊಡುವದಕ್ಕೇ ಬಂದಿವೆ. ಆತ್ಮನ ಕಡೆಗೆ ಚಿತ್ತವನ್ನು ತಿರುಗಿಸದೆ ಇರುವವರಿಗೆ ಅವುಗಳಿಂದ ಯಾವ ಪ್ರಯೋಜನವು ತಾನೆ ಆದೀತು? ಮಾತಿಗೆ ಅರ್ಥವೇ ಪ್ರಧಾನ; ವೇದವಚನಕ್ಕೆಲ್ಲ ಆತ್ಮನೇ ಅರ್ಥವು. ಆದ್ದರಿಂದ ವೇದವಚನಗಳ ಶ್ರವಣಮನನಮಾಡುವವರೂ ಆತ್ಮನ ಕಡೆಗೇ ತಿರುಗಬೇಕು. ನನಗೆ ಆತ್ಮನೇ ಬೇಕು, ಮತ್ತೆ ಯಾವದೂ ಬೇಡ–ಎಂಬ ಅನನ್ಯತೆಯು ಬಹುಮುಖ್ಯವಾದ ಸಾಧನವಾಗಿರುತ್ತದೆ. ಯಾವನಿಗೆ ಈ ಅನನ್ಯತೆಯು ಇರುವದೋ ಅವನಿಗೆ ಮಿಕ್ಕ ಸಾಧನಗಳು ಎಷ್ಟೇ ಕೊರೆಯಾಗಲಿ, ಪರಮಾತ್ಮನು ತನ್ನ ಸ್ವರೂಪವನ್ನು ಕೂಡಲೆ ಬಿಚ್ಚಿ ತೋರಿಸುವನು, ಅಥವಾ ಬಿಚ್ಚಿ ತೋರಿಸುವನೆನ್ನಲೇಕೆ? ಅವರ ಆತ್ಮನೇ ತಾನಾಗಿರುವದರಿಂದ ಹೊರಮುಖವಾಗಿದ್ದಾಗ ಅವಿದ್ಯೆಯಿಂದ ಕಾಣದಂತಾಗಿದ್ದ ಆತ್ಮನು ಕೂಡಲೆ ತನ್ನ ದಿವ್ಯಪ್ರಕಾಶವನ್ನು ಅಂಥ ಸಾಧಕರ ಕಡೆಗೆ ಬೀರುವನು, ಅವರು ತಾವೇ ಆತನೆಂಬುದನ್ನು ಯಾವ ಅಡ್ಡಿಯೂ ಇಲ್ಲದೆ ಮನಗಂಡುಬಿಡುತ್ತಾರೆ–ಎಂಬುದೇ ಯುಕ್ತವು.

ಅನಾತ್ಮವೆಲ್ಲವನ್ನೂ ಕೈಬಿಟ್ಟು ಆತ್ಮನಲ್ಲಿಯೇ ತಾತ್ಪರ್ಯದಿಂದ ನಿಷ್ಠೆಯನ್ನು ಪಡೆದರೆ ಸಾಧಕನಿಗೆ ಒಂದು ಬಗೆಯ ಬಲವುಂಟಾಗುವದು. ಆ ಬಲವಿಲ್ಲದವನಿಗೆ

ಎಂದಿಗೂ ಆತ್ಮಾನಂದವು ದೊರಕದು. ಈ ಬಲಕ್ಕೆ ಅಡ್ಡಿಯಾಗಿರುವದೇನೆಂದರೆ ಪ್ರಮಾದವು. ಲೋಕದಲ್ಲಿ ಹೆಂಡತಿ, ಮಕ್ಕಳು, ಧನ, ಪಶು, ಕ್ಷೇತ್ರ–ಎಂದು ಹಲವು ಬಣ್ಣದಿಂದ ವಿಷಯಗಳು ನಮ್ಮನ್ನು ತಮ್ಮ ಕಡೆಗೆ ಸೆಳೆದುಕೊಳ್ಳುತ್ತಿರುವವು; ಇದೇ ಪ್ರಮಾದವು. ಪ್ರಮಾದವೆಂದರೆ ಎಚ್ಚರದಪ್ಪುವದು. ಆತ್ಮಸ್ವರೂಪವನ್ನು ಎಚ್ಚರಿಕೆಯಿಂದ ಅರಿತುಕೊಳ್ಳುವದಕ್ಕೆ ಪ್ರಯತ್ನಮಾಡುವದನ್ನು ಬಿಟ್ಟು ಮನುಷ್ಯನು ವಿಷಯಚಿಂತನೆಗಳಿಂದ ಎಚ್ಚರದಪ್ಪಿ ನಡೆಯುತ್ತಾನೆ. ಅಂಥವನಿಗೆ ಆತ್ಮಪ್ರಾಪ್ತಿಯಾಗಲಾರದು. ಇನ್ನು ಮನುಷ್ಯನು ತಪಸ್ಸುಮಾಡಬಹುದು, ಸಂನ್ಯಾಸಾಶ್ರಮದ ವೇಷವನ್ನು ಹಾಕಿಕೊಳ್ಳಬಹುದು; ಈ ಹೊರಗಿನ ವೇಷದಿಂದ ಎಂದಿಗೂ ಆತ್ಮನು ದೊರಕಲಾರನು. ನಿಜವಾದ ತಪಸ್ಸೆಂದರೆ ಜ್ಞಾನವು, ನಿಜವಾದ ಸಂನ್ಯಾಸವೆಂದರೆ ಯಾವದೊಂದರ ಆಸೆಯೂ ಇಲ್ಲದೆ ಸಕಲಕರ್ಮಗಳನ್ನೂ ತೊರೆದು ಆತ್ಮನನ್ನು ಪಡೆಯಬೇಕೆಂದೇ ಹಾತುವರಿಯುತ್ತಿರುವದು. ಯಾವನು ಬರಿಯ ಒಣವಿಚಾರದಲ್ಲಿರುವನೋ ಅಥವಾ ಬರಿಯ ಆಶ್ರಮ ಸಂನ್ಯಾಸದಿಂದ ತೃಪ್ತನಾಗಿರುವನೋ ಅದರಿಂದಲೂ ಆತ್ಮಪ್ರಾಪ್ತಿಯಾಗಲಾರದು. ಮುಖ್ಯವಾಗಿ ಇಲ್ಲಿ ನೆನಪಿಡಬೇಕಾದದ್ದು ಇಷ್ಟೇ: ಯಾವ ಸಾಧನವೇ ಆಗಲಿ ನಿಜವಾಗಿ ಸಾಧನವೆನಿಸಬೇಕಾದರೆ ಸಾಧಕರನ್ನು ಆತ್ಮನ ಕಡೆಗೇ ತಿರುಗಿಸುವದಾಗಬೇಕು. ಯಾವನು ತೀವ್ರವೈರಾಗ್ಯದಿಂದ ಪರಮಹಂಸಪರಿವ್ರಾಜಕನಾಗಿ ಅಪ್ರಮಾದದಿಂದ ಕೂಡಿ ಜ್ಞಾನದಿಂದ ಆತ್ಮನಿಷ್ಠೆಯ ಬಲವನ್ನು ಹೊಂದಿರುವನೋ ಅವನ ಆತ್ಮನು ಇನ್ನು ಸಂಸಾರಿಯಾಗಿ ಉಳಿಯಲಾರನು. ಆ ಆತ್ಮನು ಬ್ರಹ್ಮಸ್ವರೂಪನಾಗಿಬಿಡುತ್ತಾನೆ.



## 22. ಜ್ಞಾನಿಗಳಿಗಾಗುವ ಮುಕ್ತಿ

ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ
ಕೃತಾತ್ಮಾನೋ ವೀತರಾಗಾಃ ಪ್ರಶಾನ್ತಾಃ।
ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ
ಯುಕ್ತಾತ್ಮಾನಃ ಸರ್ವಮೇವಾವಿಶನ್ತಿ ॥5॥

ವೇದಾನ್ತವಿಜ್ಞಾನಸುನಿಶ್ಚಿತಾರ್ಥಾಃ
ಸಂನ್ಯಾಸಯೋಗಾದ್ ಯತಯಃ ಶುದ್ಧಸತ್ತ್ವಾಃ।
ತೇ ಬ್ರಹ್ಮಲೋಕೇಷು ಪರಾನ್ತಕಾಲೇ
ಪರಾಮೃತಾಃ ಪರಿಮುಚ್ಯನ್ತಿ ಸರ್ವೇ ॥6॥

ಗತಾಃ ಕಲಾಃ ಪಞ್ಚದಶ ಪ್ರತಿಷ್ಠಾ
ದೇವಾಶ್ಚ ಸರ್ವೇ ಪ್ರತಿದೇವತಾಸು।
ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ
ಪರೇಽವ್ಯಯೇ ಸರ್ವ ಏಕೀ ಭವನ್ತಿ ॥7॥

ಯಥಾ ನದ್ಯಃ ಸ್ಯನ್ದಮಾನಾ ಸಮುದ್ರೇಽಸ್ತಂ
ಗಚ್ಛನ್ತಿ ನಾಮರೂಪೇ ವಿಹಾಯ।
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ
ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥8॥

ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ
ಬ್ರಹ್ಮೈವ ಭವತಿ ನಾಸ್ಯಾಬ್ರಹ್ಮವಿತ್ ಕುಲೇ ಭವತಿ।
ತರತಿ ಶೋಕಂ ತರತಿ ಪಾಪ್ಮಾನಂ ಗುಹಾಗ್ರನ್ಥಿಭ್ಯೋ
ವಿಮುಕ್ತೋಽಮೃತೋ ಭವತಿ ॥9॥

*"ಇವನನ್ನು ಪಡೆದುಕೊಂಡ ಋಷಿಗಳು ಜ್ಞಾನತೃಪ್ತರಾಗಿ, ಕೃತಾತ್ಮರಾಗಿ, ವೀತರಾಗರಾಗಿ ಪ್ರಶಾಂತರಾಗಿರುವರು. ಸರ್ವಗತನಾದ ಈ ಆತ್ಮನನ್ನು ಎಲ್ಲೆಲ್ಲಿಯೂ ಪಡೆದವರಾಗಿ ಯುಕ್ತಾತ್ಮರಾಗಿ ಎಲ್ಲವನ್ನೂ ಪ್ರವೇಶಿಸವರು. ವೇದಾಂತವಿಜ್ಞಾನದ ಅರ್ಥವನ್ನು ಚೆನ್ನಾಗಿ ನಿಶ್ಚಯಿಸಿಕೊಂಡು ಸಂನ್ಯಾಸಯೋಗ ದಿಂದ ಶುದ್ಧಸತ್ತ್ವರಾದ ಆ ಯತಿಗಳೆಲ್ಲರೂ ಕಟ್ಟಕಡೆಯ ಕಾಲದಲ್ಲಿ ಬ್ರಹ್ಮಲೋಕಗಳಲ್ಲಿ ಪರಾಮೃತರಾಗಿ ಪರಿಮುಕ್ತಿಯನ್ನು ಹೊಂದುವವರು.*

*ಹದಿನೈದು ಕಲೆಗಳೂ ತಮ್ಮ ನೆಲೆಗಳನ್ನು ಸೇರುತ್ತವೆ. ದೇವತೆಗಳೆಲ್ಲರೂ ಪ್ರತಿದೇವತೆಗಳಲ್ಲಿ ಸೇರುವರು. ಕರ್ಮಗಳು, ವಿಜ್ಞಾನಮಯಾತ್ಮ–ಎಲ್ಲರೂ ಅವ್ಯಯನಾದ ಪರಮಾತ್ಮನಲ್ಲಿ ಒಂದಾಗುವರು. ನದಿಗಳು ಹರಿಯುತ್ತಾ ಹೋಗಿ ನಾಮರೂಪಗಳನ್ನು ತೊರೆದು ಸಮುದ್ರದಲ್ಲಿ ಹೇಗೆ ಮರೆಯಾಗುವವೋ ಅದರಂತೆ ಜ್ಞಾನಿಯು ನಾಮರೂಪಗಳನ್ನು ಬಿಟ್ಟು ಪರಾತ್ಪರನಾದ ದಿವ್ಯಪುರುಷನನ್ನು ಸೇರುವನು. ಯಾವನೇ ಆಗಲಿ ಆ ಪರಮಬ್ರಹ್ಮವನ್ನು ಅರಿತುಕೊಂಡರೆ ಬ್ರಹ್ಮವೇ ಆಗುತ್ತಾನೆ. ಅವನ ಕುಲದಲ್ಲಿ ಬ್ರಹ್ಮಜ್ಞಾನಿಯಲ್ಲದವನು ಹುಟ್ಟುವದಿಲ್ಲ. ಅವನು ಲೋಕವನ್ನು ದಾಟುತ್ತಾನೆ, ಪಾಪವನ್ನು ದಾಟುತ್ತಾನೆ, ಗುಹಾಗ್ರಂಥಿಗಳಿಂದ ಬಿಡುಗಡೆಯನ್ನು ಹೊಂದಿ ಅಮೃತನಾಗುತ್ತಾನೆ.''*

ಈ ಸಂಸಾರಿಯಾದ ಆತ್ಮನು ಬ್ರಹ್ಮಪದವನ್ನು ಹೊಂದುವ ಬಗೆ ಹೇಗೆ?–ಎಂಬುದನ್ನು ಈಗ ವಿಮರ್ಶಿಸಬೇಕಾಗಿದೆ. ಯಾರು ತಮ್ಮ ಪರಮಾತ್ಮ ಸ್ವರೂಪವನ್ನು ಅರಿತುಕೊಳ್ಳುವರೋ ಅವರೇ ಋಷಿಗಳು. ಋಷಿಗಳೆಂದರೆ ನಿಜವನ್ನು ಕಂಡವರು. ವೇದಮಂತ್ರಗಳು ತತ್ತ್ವವನ್ನೇ ತಿಳಿಸುವದರಿಂದ ಅವನ್ನು ತಿಳಿವುಗಣ್ಣಿನಿಂದ ಕಂಡುಕೊಂಡವರಿಗೆ ಋಷಿಗಳೆಂಬ ಹೆಸರು ಬಂದಿರುತ್ತದೆ. ಆದರೆ ಆ ಹೆಸರು ಅವರಿಗೆ ಗೌಣವೃತ್ತಿಯಿಂದ ಬಂದಿರುತ್ತದೆ. ಬ್ರಹ್ಮವೇ ವೇದಗಳು ತಿಳಿಸುವ ಪರಮಾರ್ಥತತ್ತ್ವವು; ಆದ್ದರಿಂದ ಬ್ರಹ್ಮಜ್ಞಾನಿಗಳೇ ಮುಖ್ಯವೃತ್ತಿಯಿಂದ ಋಷಿಗಳೆನಿಸುತ್ತಾರೆ. ಈ ಋಷಿಗಳು ಜ್ಞಾನಮಾತ್ರದಿಂದಲೇ ತೃಪ್ತರಾಗಿರುತ್ತಾರೆ; ಅವರಿಗೆ ಶರೀರೇಂದ್ರಿಯಗಳನ್ನು ತೃಪ್ತಿಗೊಳಿಸುವ ವಿಷಯಗಳ ಹಂಬಲು ಒಂದಿಷ್ಟೂ ಇರುವದೇ ಇಲ್ಲ. ಅವರ ಆತ್ಮನು ನಿಜವಾಗಿಯೂ ಆತ್ಮನೇ ಆಗಿರುತ್ತಾನೆ; ಮಿಕ್ಕವರಂತೆ ದೇಹಾದಿಗಳನ್ನೇ ಅವರು ತಮ್ಮ ಆತ್ಮನೆಂದು ತಿಳಿದು ತಬ್ಬಿಕೊಂಡಿರುವದಿಲ್ಲ. ಆದ್ದರಿಂದ ಅವರು ಕೃತಾತ್ಮರಾಗಿರುತ್ತಾರೆ; ಅವರ ಆತ್ಮನು ಜ್ಞಾನದಿಂದ ಪರಮಾತ್ಮರೂಪವನ್ನು ಹೊಂದಿರುತ್ತಾನೆ. ಆದ್ದರಿಂದಲೇ ಅವರಲ್ಲಿ ರಾಗದ್ವೇಷಮೋಹಾದಿಗಳು ಇರುವದಕ್ಕೆ ಅವಕಾಶವಿಲ್ಲ. ಯಾರಿಗೆ ''ನಾನು ಬೇರೆ ಒಬ್ಬನು, ಮಿಕ್ಕವರು ನನಗಿಂತ ಬೇರೆಯಾಗಿರುವ ಮಿತ್ರರು ಅಥವಾ ಶತ್ರುಗಳು'' ಎಂಬ ಭಾವನೆಯಿರುವದೋ, ಅವರು ಅಕೃತಾತ್ಮರಾದ್ದರಿಂದ ಅವರಿಗೆ ರಾಗದ್ವೇಷಾದಿ ಗಳಿರಬಹುದು. ಅದ್ವಿತೀಯನಾದ ಪರಮಾತ್ಮನೇ ತಾವೆಂದೂ, ಎಲ್ಲರೂ ತಮ್ಮ ಸ್ವರೂಪರೇ ಎಂದೂ ಯಾರಿಗೆ ಅರಿವಾಗಿಬಿಟ್ಟಿರುವದೋ ಅಂಥವರಿಗೆ ರಾಗದ್ವೇಷಗಳು ಎಲ್ಲಿಂದ ಬರಬೇಕು? ಆದಕಾರಣ ಜ್ಞಾನಿಗಳು ರಾಗದ್ವೇಷಗಳಿಲ್ಲದೆ ಪ್ರಶಾಂತ ರಾಗಿರುತ್ತಾರೆ. ಅವರ ಕರಣಗಳು ಹೊರಕ್ಕೆ ಹರಿಯದೆ ಸುಮ್ಮನಿರುತ್ತವೆ.

ಜ್ಞಾನಿಗಳ ಸ್ವರೂಪವು ಇಂಥದ್ದು. ಅವರಿಗೆ ಆತ್ಮನು ಉಪಾಧಿಯ ಅಳತೆಗೆ

ಸಿಕ್ಕಿರುವ ಸಂಸಾರಿಯಾಗಿ ಯಾವದಾದರೊಂದು ಶರೀರದ ಒಳಗೆ ಇರುವದಿಲ್ಲ; ಅವರ ಆತ್ಮನೆಂದರೆ ಸರ್ವಗತನು, ಎಲ್ಲೆಲ್ಲಿಯೂ ಇರುವವನು. ಆದ್ದರಿಂದ ಅವರು ಆತ್ಮನನ್ನು ಪಡೆಯುವದಕ್ಕೆ ಯಾವದಾದರೂ ಲೋಕಕ್ಕೆ ಹೋಗಬೇಕಾಗಿರುವದಿಲ್ಲ. ಅವರಿಗೆ ಎಲ್ಲೆಲ್ಲಿಯೂ ಆತ್ಮನೇ; ಅವನು ನಿತ್ಯಪ್ರಾಪ್ತನಾಗಿರುತ್ತಾನೆ. ಅವರಿಗೆ ಮನಸ್ಸಿನ ವಿವೇಕವಾಗಲಿ ಸಮಾಧಾನವಾಗಲಿ ಸಾಧನದಿಂದ ಬರಬೇಕಾಗಿರುವದಿಲ್ಲ. ಅವರು ನಿತ್ಯವಿವೇಕಿಗಳು, ನಿತ್ಯಯುಕ್ತರು. ಹೀಗಿರುವದರಿಂದ ಅವರು ಬದುಕಿರುವಾಗಲೇ ಬ್ರಹ್ಮದಲ್ಲಿರುತ್ತಾರೆ. ಇತರರ ದೃಷ್ಟಿಯಿಂದ ಅವರಿಗೆ ಶರೀರವಿರುತ್ತದೆ. ಆ ಶರೀರವು ಬಿದ್ದುಹೋದರೂ ಅವರು ಬ್ರಹ್ಮವನ್ನೇ ಸೇರಿರುತ್ತಾರೆ. ಗಡಿಗೆಯೊಳಗಿನ ಆಕಾಶವು ಗಡಿಗೆಯಿರುವಾಗಲೂ ಒಡೆದುಹೋದ ಮೇಲೂ ಆಕಾಶವೇ ಆಗಿರುವಂತೆಯೂ ಗಡಿಗೆಯ ರೂಪದಿಂದಲೂ ಆಕಾಶವೇ ಇರುವಂತೆಯೂ ಅವರ ಶರೀರವೆಂಬುದು ಇತರರ ತಪ್ಪು ತಿಳಿವಿನಿಂದ ಬೇರೆಯಾಗಿರುವಂತೆ ತೋರುತ್ತಿದ್ದರೂ ಅದೂ ನಿಜವಾಗಿ ಪರಮಾತ್ಮನೇ ಆಗಿರುತ್ತದೆ. ಆದ್ದರಿಂದ ಜ್ಞಾನಿಗಳು ಬದುಕಿರುವಾಗ ಅಮುಕ್ತರಾಗಿದ್ದು ಸತ್ತಬಳಿಕ ಮುಕ್ತರಾಗುವದಿಲ್ಲ. ಅವರು ಈಗಲೂ ಮುಕ್ತರೇ, ಆಗಲೂ ಮುಕ್ತರೇ, ಯಾವಾಗಲೂ ಮುಕ್ತರೇ.

ವೇದಾಂತವಿಜ್ಞಾನದ ಅರ್ಥವೇನೆಂಬುದನ್ನು ಅವರು ಚೆನ್ನಾಗಿ ನಿಶ್ಚಯ ಮಾಡಿಕೊಂಡಿರುವರು. ವೇದಾಂತವೆಂದರೆ ಉಪನಿಷತ್ತು, ಅದು ಹೇಳುವದನ್ನು ಅರಿತುಕೊಂಡರೆ ಆಗುವ ವಿಜ್ಞಾನವು, ಎಂದರೆ ಅನುಭವವು, ತಿಳಿಸುವದು ಎಲ್ಲರಿಗೂ ಆತ್ಮನಾಗಿರುವ ಅದ್ವಿತೀಯನಾದ ಪರಮಾತ್ಮನನ್ನೇ. ಆ ಪರಮಾತ್ಮನ ಸ್ವರೂಪವನ್ನು ಸುನಿಶ್ಚಿತವಾಗಿ ಅರಿತುಕೊಂಡಿರುವದರಿಂದ ಅವರು ನಿತ್ಯಮುಕ್ತರಾಗಿರುತ್ತಾರೆ. ಸರ್ವಕರ್ಮಸಂನ್ಯಾಸವೆಂಬ ಯೋಗದಿಂದ ಅವರು ಅಂತಃಕರಣವನ್ನು ಶುದ್ಧಗೊಳಿಸಿಕೊಂಡಿರುತ್ತಾರೆ. ಕರ್ಮ, ಧ್ಯಾನಯೋಗ–ಮುಂತಾದವುಗಳಿಂದಾಗುವ ಶುದ್ಧಿಯು ಆಪೇಕ್ಷಿಕವಾದದ್ದು; ಸತ್ತ್ವಶುದ್ಧಿಯು ಆತ್ಯಂತಿಕವಾಗಿ ಆಗಬೇಕಾದರೆ ಅತ್ಯಂತಪರಿಶುದ್ಧನಾದ ಕರ್ತೃತ್ವಭೋಕ್ತೃತ್ವದ ಕಲ್ಮಷವಿಲ್ಲದ ಪರಮಾತ್ಮನೇ ತಾನೆಂಬ ವಿಜ್ಞಾನವು ಅತ್ಯವಶ್ಯವಾಗಿರುತ್ತದೆ. ಆದ್ದರಿಂದ ಈ ನೈಷ್ಕರ್ಮ್ಯವೆಂಬ ಪರಮಾರ್ಥ ಸಂನ್ಯಾಸ ಯೋಗದಿಂದ ಸತ್ತ್ವಶುದ್ಧಿಯಾಗಿರುವದರಿಂದ ಜ್ಞಾನಿಗಳು ಕೃತಕೃತ್ಯರಾಗಿರುತ್ತಾರೆ. ಅವರು ಇನ್ನು ಮತ್ತೆ ಶರೀರಧಾರಣೆಯನ್ನು ಮಾಡಬೇಕಾದದ್ದಿರುವದಿಲ್ಲ. ಅಜ್ಞರು ಶರೀರವನ್ನು ಅಂತ್ಯಕಾಲದಲ್ಲಿ ಬಿಟ್ಟರೂ ಮತ್ತೆಶರೀರವನ್ನು ಹೊಂದಲೇಬೇಕು; ಆದ್ದರಿಂದ ಮರಣವಾಗಲಿ ಪ್ರಲಯವಾಗಲಿ ಅವರಿಗೆ ಅಂತಕಾಲವೆಂದರೂ ಅದೇ ಪರಾಂತಕಾಲವಲ್ಲ, ಕಟ್ಟಕಡೆಯ ಕಾಲವಲ್ಲ. ಆದರೆ ಮುಮುಕ್ಷುಗಳಾದವರು ಜ್ಞಾನವನ್ನು ಹೊಂದಿ ಶರೀರವನ್ನು ಬಿಟ್ಟರೆ ಇನ್ನು ಎಂದಿಗೂ ಶರೀರವನ್ನು ಹೊಂದುವದೇ ಇಲ್ಲ.

ಈಗಲೇ ಶರೀರವಿಲ್ಲವೆಂದೂ ಮಿಥ್ಯಾಜ್ಞಾನದಿಂದ ಅದು ನಿಜವಾಗಿರುವಂತೆ ಈವರೆಗೆ ತೋರುತ್ತಿತ್ತೆಂದೂ ಅವರು ತಿಳಿದಿರುತ್ತಾರೆ; ಹೀಗಿರುವಲ್ಲಿ ಈಗಿನ ಶರೀರವು ಬಿದ್ದಮೇಲೆ ಮತ್ತೊಂದು ಶರೀರವು ಹೇಗೆ ಬಂದೀತು? ಮಿಕ್ಕವರು ತಮ್ಮ ತಮ್ಮ ಕರ್ಮಗಳಿಂದಲೂ ಉಪಾಸನೆಗಳಿಂದಲೂ ಆಯಾ ಸಾಧನಕ್ಕೆ ತಕ್ಕ ಲೋಕಗಳನ್ನು ಪಡೆಯುತ್ತಾರೆಷ್ಟೆ. ಆದರೆ ಈ ಲೋಕಗಳೆಲ್ಲವೂ ಎಲ್ಲಿವೆ? ಅವೆಲ್ಲವೂ ಪರಮಾರ್ಥವಾಗಿ ಬ್ರಹ್ಮವೇ. ಬ್ರಹ್ಮವನ್ನು ಬಿಟ್ಟರೆ ಯಾವ ಲೋಕಗಳೂ ಇಲ್ಲವೇ ಇಲ್ಲ. ಆದ್ದರಿಂದ ಜ್ಞಾನಿಯು ಬ್ರಹ್ಮವನ್ನು ಪಡೆದರೆ ಅವನು ಎಲ್ಲಾ ಲೋಕಗಳನ್ನೂ ಪಡೆದುಕೊಂಡಂತೆಯೇ ಆಗುತ್ತದೆ. ಅವನು ಬ್ರಹ್ಮವನ್ನು ಪಡೆಯುತ್ತಾನೆಂದು ಹೇಳುವದೂ ಉಪಚಾರದ ಮಾತೇ; ಏಕೆಂದರೆ ಬ್ರಹ್ಮವು ಸರ್ವವೂ ಆಗಿದ್ದರೆ ಬ್ರಹ್ಮವನ್ನು ಯಾರು ಎಲ್ಲಿಂದ ಎಲ್ಲಿಗೆ ಹೋಗಿ ಮುಟ್ಟಬೇಕು? ಜ್ಞಾನಿಗಳೆಲ್ಲರೂ ನಿಜವಾಗಿ ಬದುಕಿರುವಾಗಲೇ ಮರಣರಹಿತವಾದ ಪರಬ್ರಹ್ಮವೇ ಆಗಿರುತ್ತಾರೆ. ದೇವತೆಗಳು ಅಮರರೆಂದೂ ಮರಣರಹಿತರೆಂದೂ ಹೇಳುವದುಂಟು; ಆದರೆ ಅವರಿಗೂ ಕಲ್ಪಾಂತರದಲ್ಲಿ ಮರಣವುಂಟು. ಆದ್ದರಿಂದ ಅವರು ಪರಾಮೃತರಲ್ಲ, ಎಂದೆಂದಿಗೂ ಮರಣವಿಲ್ಲದವರಲ್ಲ. ಆದರೆ ಬ್ರಹ್ಮೈಕ್ಯವನ್ನು ಹೊಂದಿದ ಜ್ಞಾನಿಗಳು ಪರಾಮೃತರು. ಅವರು ಬದುಕಿರುವಾಗಲೇ ಹೀಗೆ ಪರಾಮೃತರಾಗಿದ್ದುಕೊಂಡು ಪರಿಮುಕ್ತರಾಗುವರು; ಅವರ ಸರ್ವಾತ್ಮಭಾವಕ್ಕೆ ಎಲ್ಲೆಗಟ್ಟಿನಂತೆ ತೋರುತ್ತಿದ್ದ ಶರೀರಾದಿಗಳೂ ತೋರದೆ ಹೋಗಿಬಿಡುವದರಿಂದ ಯಾವ ಅಡಚಣೆಯೂ ಇಲ್ಲದೆ ಪರಬ್ರಹ್ಮವೇ ಆಗುವರು. ಗಡಿಗೆಯ ಆಕಾಶವು ಯಾವಾಗಲೂ ಆಕಾಶವೇ ಆಗಿರುತ್ತಿದ್ದರೂ, ದೀಪದ ಬೆಳಕು ಯಾವಾಗಲೂ ಬೆಳಕೇ ಆಗಿರುತ್ತಿದ್ದರೂ, ಆಕಾಶಕ್ಕೆ ಗಡಿಗೆಯ ಸಂಬಂಧವು ಬೆಳಕಿಗೆ ಬತ್ತಿಯೆಣ್ಣೆಗಳ ಸಂಬಂಧವೂ ಇರುವಂತೆ ತೋರುವದಿಲ್ಲವೆ? ಹಾಗೆಯೇ ಜೀವನ್ಮುಕ್ತರೇ ಆಗಿರುವ ಬ್ರಹ್ಮಜ್ಞಾನಿಗಳಿಗೂ ಶರೀರವೇ ಮುಂತಾದ ಉಪಾಧಿಗಳ ಸಂಬಂಧವಿರುವಂತೆ ನಮ್ಮ ಅಜ್ಞಾನದ ತಿಳಿವಿಗೆ ತೋರುತ್ತದೆ. ಈ ದೃಷ್ಟಿಯಿಂದ ನೋಡಿದರೆ ಅವರಿಗೆ ಶರೀರವು ಕಳಚಿದ ಮೇಲೆ ಪರಿಮುಕ್ತಿಯಾಗುತ್ತದೆ; ಎಂದರೆ ಆಕಾಶವು ಗಡಿಗೆಯ ಕಟ್ಟನ್ನು ಬಿಡಿಸಿಕೊಂಡು ಅನಂತಾಕಾಶದಲ್ಲಿ ಒಂದಾಗುವಂತೆಯೂ, ದೀಪವು ಎಣ್ಣೆಬತ್ತಿಗಳ ಸಂಬಂಧವನ್ನು ಬಿಡಿಸಿಕೊಂಡು ಅವ್ಯಕ್ತವಾದ ಬೆಳಕಿನಲ್ಲಿ ಒಂದಾಗುವಂತೆಯೂ, ಅವರು ಅನಂತವಾದ ಬ್ರಹ್ಮದಲ್ಲಿ ಸೇರಿಹೋಗುತ್ತಾರೆ. ಬ್ರಹ್ಮದಲ್ಲಿ ಸೇರುವದಕ್ಕೆ ಅವರು ಎಲ್ಲಿಗೂ ಹೋಗಬೇಕಾದದ್ದಿಲ್ಲ. ಅವರು ಹೋಗುವ ದಾರಿ ಇಂಥದ್ದೆಂದು ನಿರ್ಧರಿಸಿ ಹೇಳುವದು ಎಂಥ ಅಣಿಮಾದಿಸಿದ್ಧಿಗಳುಳ್ಳ ಯೋಗಿಗಳಿಂದಲೂ ಆಗಲಾರದು. ಏಕೆಂದರೆ ಅವರು ದಾರಿನಡೆಯದೆಯೇ ಮಜಲುಮುಟ್ಟುವ ಧೀರರು! ಆಕಾಶದಲ್ಲಿ ಹಾರಾಡುವ ಹಕ್ಕಿಗಳ ಹೆಜ್ಜೆಯ ಗುರುತು ಆಕಾಶದಲ್ಲಿ ತೋರುವದೆ? ಮೀನುಗಳ ಓಡಾಟದ ಗುರುತು ನೀರಿನಲ್ಲಿ

ಉಳಿಯುವದೆ? ಇಲ್ಲ. ಹಾಗೆ ಬ್ರಹ್ಮಜ್ಞಾನಿಗಳ ಹೆಜ್ಜೆಯ ಗುರುತನ್ನು ಯಾರಿಂದಲೂ ಕಾಣುವದಕ್ಕಾಗಲಾರದು. ಏಕೆಂದರೆ ಅವರು ನಡೆಯುವದೇ ಇಲ್ಲ. ಅವರು ಇದ್ದಲ್ಲಿಯೇ ಬ್ರಹ್ಮವಾಗುವರು. ಬ್ರಹ್ಮವಾಗುವದೆಂದರೂ ಅವಿದ್ಯಾದಿಬಂಧಗಳನ್ನು ಜ್ಞಾನದಿಂದ ಕಳಚಿಕೊಳ್ಳುವದೇ ಹೊರತು ಹೊಸದೊಂದು ರೂಪವನ್ನು ತಳೆಯುವದೇನೂ ಅಲ್ಲ. ಆದ್ದರಿಂದ ಜ್ಞಾನಿಯ ಮುಕ್ತಿಮಾರ್ಗವನ್ನು ಜ್ಞಾನಿಗಳಲ್ಲದೆ ಮತ್ತೆಯಾರೂ ಮನಸ್ಸಿನಿಂದಲೂ ಹೀಗೆಂದು ತಿಳಿಯಲಾರರು.

ಜ್ಞಾನಿಗಳು ಪರಿಮುಕ್ತರಾದಾಗ ಅವರ ಶರೀರವೇ ಮುಂತಾದವುಗಳು ಏನಾಗುವವು?–ಎಂದು ಕೇಳಬಾರದು. ಏಕೆಂದರೆ ಅವುಗಳು ನಿಜವಾಗಿರುವದೇ ಇಲ್ಲ, ಅವಿದ್ಯೆಯಿಂದ ತೋರುತ್ತಿರುವವು ಎಂದು ಮೊದಲೇ ಹೇಳಿರುತ್ತದೆ. ಪಂಚಭೂತಗಳಿಂದಾಗಿರುವ ಶರೀರ, ಇಂದ್ರಿಯಗಳು, ಪ್ರಾಣ, ಮಂತ್ರ, ಕರ್ಮ, ಕರ್ಮ ಫಲಗಳು–ಇವು ಯಾವಯಾವದರಿಂದುಂಟಾಗಿರುವವೋ ಅವುಗಳನ್ನು ಸೇರಿಕೊಂಡುಬಿಡುತ್ತವೆ. ಅವು ಇದ್ದಾಗ ಹೇಗೆ ಹುಸಿಯೋ ಕಾರಣವನ್ನು ಸೇರಿಕೊಂಡಮೇಲೂ ಹಾಗೆಯೇ ಹುಸಿ. ತೋರುವದು, ತೋರದಿರುವದು– ಇಷ್ಟುಮಾತ್ರದಿಂದ ಕನಸಿನ ವಸ್ತುಗಳ ತಿರುಳಿನಲ್ಲಿ ಯಾವ ಹೆಚ್ಚುಕಡಿಮೆಯಾದೀತು? ಇದರಂತೆಯೇ ಮೊದಲು ತೋರುತ್ತಿದ್ದ ಭೌತಿಕೋಪಾಧಿಗಳೆಲ್ಲವೂ ತೋರಿಅಡಗುತ್ತವೆ. ಅದುವರೆಗೆ ಮಾಡಿದ್ದ ಕರ್ಮವೊ? ಅದು ಕನಸಿನ ಕರ್ಮದಂತೆ ಹಾರಿಹೋಗಿಬಿಡುತ್ತದೆ. ಜ್ಞಾನಿಗಳು ಬದುಕಿರುವಾಗ ತೋರುವ ಪ್ರಾರಬ್ಧಕರ್ಮಗಳು ಮಾತ್ರ ದೇಹವಿರುವವರೆಗೂ ಫಲವನ್ನು ಕೊಟ್ಟು ನಾಶವಾಗುತ್ತವೆ; ಕನಸಿನಲ್ಲಿನಾವು ತಿಂದ ಫಲವು ತಿಂದದ್ದಾಯಿತೆಂದು ತೋರಿ, ತಿನ್ನದೆ ಹಾಗೇ ಉಳಿದಿದ್ದದ್ದು ಹಾಗೆಯೇ, ಎಚ್ಚರವಾಗುತ್ತಲೂ ಮಾಯವಾಗುವಂತೆ ಮುಕ್ತಿಕಾಲದಲ್ಲಿ ಎಲ್ಲವೂ ಮಾಯವಾಗಿಬಿಡುತ್ತದೆ. ಸಂಸಾರಕಾಲದಲ್ಲಿ ನಾನು, ನಾನು– ಎಂದು ತೋರಿಕೊಳ್ಳುತ್ತಿರುವ ವಿಜ್ಞಾನಮಯಾತ್ಮನೂ ಹೀಗೆಯೇ ಮಾಯವಾಗಿಬಿಡುತ್ತಾನೆ. ನಮ್ಮ ಮುಂದೆ ಇರುವ ನೀರಿನಲ್ಲಿ ಅಥವಾ ಕನ್ನಡಿಯಲ್ಲಿ ತೋರುವ ನಮ್ಮ ಮುಖದ ಪ್ರತಿಬಿಂಬವು ಆ ನೀರು ಅಥವಾ ಕನ್ನಡಿಯು ಹೋಗುತ್ತಲೂ ತಾನೂ ಮರೆಯಾಗುವಂತೆ ಸಂಸಾರದಲ್ಲಿ ಉಪಾಧಿಗಳ ಸಂಬಂಧದಿಂದ ತೋರುತ್ತಿರುವ ನಮ್ಮ ಮಾಯಾರೂಪವಾದ ಜೀವರೂಪವೂ ಮುಕ್ತಿಯಲ್ಲಿ ಮರೆಯಾಗಿಬಿಡುತ್ತದೆ. ಆದರೆ ಇಷ್ಟುಮಾತ್ರದಿಂದ ನಾವೇ ನಾಶವಾಗಿಬಿಡುವೆವೆಂದು ಮಾತ್ರ ಬಗೆಯಬಾರದು. ನಿಜವಾಗಿ ನೋಡಿದರೆ ಶರೀರಾದಿಗಳಾಗಲಿ ನಮ್ಮ ಜೀವರೂಪವಾಗಲಿ, ನಮ್ಮ ಪರಮಾರ್ಥವಾದ ಶುದ್ಧಾತ್ಮಸ್ವರೂಪಕ್ಕಿಂತ ಬೇರೆಯಾಗಿ ಈಗಲೂ ಇರುವದೇ ಇಲ್ಲ. ಹೀಗಿರುವಲ್ಲಿ ಅದು ನಾಶವಾಗುವದೆಂತು? ಉಪಾಧಿಗಳಿಂದ ತೋರುವ ರೂಪವು ಎಂದಿಗೂ ನಮ್ಮ

ಪರಮಾರ್ಥರೂಪವಾಗಲಾರದು. ಅವಿದ್ಯೆಯಿಂದ ತೋರುವ ಉಪಾಧಿಗಳು ಕೂಡ ಎಂದಿಗೂ ಪರಮಾರ್ಥವಾಗಲಾರವು. ಅವು ಯಾವವೂ ಆತ್ಮನಿಗಿಂತ ಬೇರೆಯಾಗಿರುವದಿಲ್ಲ, ಅವು ತೋರುವಾಗ ಆತ್ಮನ ಆಸರೆಯಿಂದಲೇ ತೋರುತ್ತಿದ್ದು ಆತ್ಮನಲ್ಲಿಯೇ ಅಡಗುವವು. ಈ ನಮ್ಮ ನಿಜವಾದ ಆತ್ಮಸ್ವರೂಪವು ಅನಂತವಾದದ್ದು, ನಾಶವಿಲ್ಲದ್ದು, ಸವೆಯಲಾರದ್ದು, ಹುಟ್ಟಿಲ್ಲದ್ದು, ಮುಪ್ಪಿಲ್ಲದ್ದು, ಸಾವಿಲ್ಲದ್ದು ಅಂಜಿಕೆಯಿಲ್ಲದ್ದು ಹಿಂದಿಲ್ಲದ್ದು ಮುಂದಿಲ್ಲದ್ದು, ಒಳಗಿಲ್ಲದ್ದು, ಹೊರಗಿಲ್ಲದ್ದು, ಮಂಗಲ ಕರವಾದದ್ದು, ಶಾಂತಸ್ವರೂಪವಾದದ್ದು. ಮುಕ್ತಿಯಲ್ಲಿ ಇದೆಲ್ಲವೂ ಏನಾಗುವದು?- ಎಂಬ ಪ್ರಶ್ನೆಗೆ ಒಂದೇ ಒಂದು ಉತ್ತರವಿದೆ: ಹಗ್ಗದಲ್ಲಿ ಕಲ್ಪಿತವಾಗಿರುವ ಹಾವು, ನೀರಿನ ಕೋಡಿ-ಮುಂತಾದವುಗಳು ಹೇಗೆ ಜ್ಞಾನಸಮಯದಲ್ಲಿ ಹಗ್ಗವೇ ಆಗಿಬಿಡುವವೋ, ಹಗ್ಗಕ್ಕಿಂತ ಬೇರೆಯಾಗಿ ಒಂದಿಷ್ಟೂ ಇರುವದಿಲ್ಲವೋ, ಹಾಗೆ ಇದೆಲ್ಲವೂ ನಮ್ಮ ಪರಮಾರ್ಥವಾದ ನಿತ್ಯಶುದ್ಧಬುದ್ಧ ಮುಕ್ತಾತ್ಮನಲ್ಲಿ, ನೀರು ಹೋದರೆ ಪ್ರತಿಬಿಂಬವು ಬಿಂಬದಲ್ಲಿ ಐಕ್ಯವಾಗುವಂತೆಯೂ ಗಡಿಗೆಯು ಒಡೆದು ಒಳಗಿನ ಆಕಾಶವು ಮಹಾಕಾಶದಲ್ಲಿ ಒಂದಾಗುವಂತೆಯೂ, ಒಂದಾಗಿಬಿಡುತ್ತದೆ. ಇದೇ ಪುನರ್ಜನ್ಮವಿಲ್ಲದ ಮುಕ್ತಿಯು.

ಇದಕ್ಕೊಂದು ದೃಷ್ಟಾಂತವನ್ನು ಕೊಡಬಹುದು: ಸಿಂಧು, ಗಂಗೆ-ಮುಂತಾದವುಗಳೂ ನೀರೇ; ಸಮುದ್ರವೂ ನೀರೇ. ನೀರೇ ಆವಿಯಾಗಿ ಮೋಡವಾಗಿ ಮಳೆಯಾಗಿ ಹೊಳೆಯಾಗಿ ಸಮುದ್ರದ ರೂಪವನ್ನು ತಳೆಯುತ್ತಿರುವದು. ಹೀಗಿದ್ದರೂ ಗಂಗೆ, ಸಿಂಧು-ಎಂದು ತಮ್ಮ ತಮ್ಮ ಪಾತ್ರಗಳ ದೆಸೆಯಿಂದ ಆಯಾ ನದಿಗಳು ಬೇರೆಬೇರೆಯಾದ ನಾಮರೂಪಗಳನ್ನು ಪಡೆದುಕೊಂಡಿದ್ದು ಹರಿದುಹೋಗಿ ಕೊನೆಯಲ್ಲಿ ಸಮುದ್ರದಲ್ಲಿ ಸೇರಿದಬಳಿಕ ಹೇಗೆ ನದಿಗಳ ರೂಪದಲ್ಲಿಲ್ಲದೆ ಹೋಗುವವೋ, ಆದರೂ ಹೇಗೆ ಅವು ನಿಜವಾಗಿ ಎಂದೆಂದಿಗೂ ನೀರೇ ಆಗಿರುವವೋ, ಹಾಗೆಯೇ ಜ್ಞಾನಿಗಳು ಈಗಲೂ ಪರಬ್ರಹ್ಮಸ್ವರೂಪರೇ ಆಗಿರುತ್ತಾರಾದರೂ ಆಯಾ ಶರೀರದ್ಯುಪಾಧಿಗಳಿಂದ ಬೇರೆಬೇರೆಯಾದ ನಾಮರೂಪಗಳುಳ್ಳವರಾಗಿರುತ್ತಾರೆ. ಅವಿದ್ಯಾಕೃತವಾದ ಈ ಉಪಾಧಿಗಳಿಲ್ಲದಿರುವಾಗ ತಮ್ಮ ನಾಮರೂಪಗಳನ್ನು ಬಿಟ್ಟು ಪರಬ್ರಹ್ಮವನ್ನೇ ಸೇರಿಕೊಳ್ಳುತ್ತಾರೆ. ಅವರ ಸ್ವರೂಪವು ಮಾತ್ರ ಯಾವಾಗಲೂ ಎಂದೆಂದಿಗೂ ಶುದ್ಧಚೈತನ್ಯವೇ; ಅದಕ್ಕೆ ಎಂದಿಗೂ ಚ್ಯುತಿಯಿಲ್ಲವೇ ಇಲ್ಲ.

ಹೆಚ್ಚೇನು? ಯಾವನು ಈ ಬ್ರಹ್ಮತತ್ತ್ವವನ್ನು ಅರಿತುಕೊಳ್ಳುವನೋ ಅವನು ಬ್ರಹ್ಮವೇ ಆಗುತ್ತಾನೆ. ಬ್ರಹ್ಮವೆಂಬುದು ಪರಮೇಶ್ವರನ ಸ್ವರೂಪವಾದದ್ದು. ಆದ್ದರಿಂದ ದೇವತೆಗಳು ತಮಗಿಂತ ಮೇಲಿನ ಸ್ಥಿತಿಯಾದ ಈ ಸ್ವರೂಪವನ್ನು ಪಡೆದುಕೊಳ್ಳಲೆಳಸುವ ಮನುಷ್ಯರಿಗೆ ಅಡ್ಡಿಯಾಗುವರೆಂದಾಗಲಿ ಯಾವದಾದರೊಂದು ರಾಗಾದಿಕ್ಲೇಶದ

ಸಂಬಂಧದಿಂದ ಆ ಸ್ವರೂಪವನ್ನು ಪಡೆಯುವದಕ್ಕೆ ಅಡಚಣೆಯಾದೀತೆಂದಾಗಲಿ ಶಂಕಿಸಬಾರದು. ಏಕೆಂದರೆ ದೇವತೆಗಳು ಮನುಷ್ಯರಿಗಿಂತ ಮೇಲಿನ ತರಗತಿಯಲ್ಲಿರುತ್ತಾರೆಂದು ಕಾಣುವದೂ ಮನುಷ್ಯರಾದ ನಾವು ಅವಿದ್ಯೆ, ಅಸ್ಮಿತೆ–ಮುಂತಾದ ಕ್ಲೇಶಗಳಿಗೊಳಪಟ್ಟಿರುವೆವೆಂದು ಕಾಣುವದೂ ಬ್ರಹ್ಮವನ್ನರಿಯದ್ದ ರಿಂದಾಗಿರುವ ಮಿಥ್ಯಾಜ್ಞಾನದಿಂದ; ಆದರೆ ಯಾವಾಗ ಜನರು ಆ ಬ್ರಹ್ಮವೇ ತಮ್ಮ ಸ್ವರೂಪವೆಂದು ಅರಿತುಕೊಳ್ಳುವರೋ ಆ ಕ್ಷಣದಲ್ಲಿಯೇ ಅವಿದ್ಯೆಯಿಂದ ಕಲ್ಪಿತವಾಗಿರುವ ಈ ಉಚ್ಚನೀಚಭಾವವೆಲ್ಲವೂ ಮಾಯವಾಗಿಬಿಡುವದು. ಯಾವನು ಬ್ರಹ್ಮವನ್ನರಿತುಕೊಳ್ಳುವನೋ ಅವನಿಗೆ ಅದರ ಪ್ರಾಪ್ತಿಯಾಗದಿರುವಂತೆ ಮಾಡುವದು ದೇವತೆಗಳಿಂದಲೂ ಆಗಲಾರದು. ಏಕೆಂದರೆ ಬ್ರಹ್ಮವೆಂದರೆ ಎಲ್ಲರ ಆತ್ಮನು. ಈ ಬ್ರಹ್ಮವು ದೇವತೆಗಳಿಗೂ ಆತ್ಮನಾಗಿಬಿಟ್ಟಿರುತ್ತದೆ. ಆದ್ದರಿಂದ ದೇವತೆಗಳು ತಮ್ಮ ಆತ್ಮನನ್ನು ಹೇಗೆ ಹಗೆಮಾಡಿಯಾರು? ಅದ್ವಿತೀಯಾತ್ಮನೇ ತಾನೆಂದು ಮನಗಾಣುವಾತನಿಗೆ ಎರಡನೆಯದಾದ ಯಾವ ಅಡ್ಡಿಯೂ ಇರುವದಿಲ್ಲ. "ಕನಸಿನಲ್ಲಿ ತನ್ನನ್ನು ಕಟ್ಟಿಹಾಕಿದ್ದ ರಾಜನ ಕಡೆಯ ಸಿಪಾಯಿಗಳು ಎಚ್ಚರದಲ್ಲಿಯೂ ಬಂದರೇನು ಗತಿ!" ಎಂಬ ಅಂಜಿಕೆಯಂತೆಯೇ ಈ ಅಂಜಿಕೆಯು ನಿರಾಧಾರವಾಗಿರುತ್ತದೆ.

ಆದ್ದರಿಂದ ಬ್ರಹ್ಮವನ್ನು ಅರಿತವನು ಬ್ರಹ್ಮವೇ ಆಗಿಬಿಡುತ್ತಾನೆ. ಅವನ ಕುಲದಲ್ಲಿ ಅಜ್ಞಾನಿಯಾದವನೇ ಹುಟ್ಟುವದಿಲ್ಲ. ಬ್ರಹ್ಮಜ್ಞಾನಿಯಾದವನು ಅತ್ಯಂತ ವಿರಕ್ತನಾಗಿರುವದರಿಂದ ಅವನಿಂದ ಮುಂದೆ ಪುತ್ರೋತ್ಪತ್ತಿಯಾಗುವ ಸಂಭವವು ತೀರ ಕಡಿಮೆಯಿರುತ್ತದೆ. ಆದರೆ ಪ್ರಾರಬ್ಧಕರ್ಮವಶದಿಂದ ಅವನಿಗೆ ಪುತ್ರರು ಹುಟ್ಟಿದರೆ ಅವರೂ ಬ್ರಹ್ಮಜ್ಞಾನಿಗಳೇ ಆಗಿರುತ್ತಾರೆ. ಯೋಗಭ್ರಷ್ಟನಾದವನು ಶುಚಿಯಾಗಿ ಶ್ರೀಮಂತರಾಗಿರುವವರ ಮನೆಯಲ್ಲಿ ಹುಟ್ಟುತ್ತಾನೆಂದು ಭಗವದ್ಗೀತೆಯಲ್ಲಿ ಹೇಳಿರುತ್ತದೆಯಲ್ಲವೆ? ಆ ವಾಕ್ಯಕ್ಕೇ ಇದೇ ತಾತ್ಪರ್ಯವು. ಬ್ರಹ್ಮಜ್ಞಾನಿಯ ಮಗನಾಗಿ ಹುಟ್ಟುವದೆಂಬುದು ಅತ್ಯಂತದುರ್ಲಭವಾದದ್ದು. ಹೀಗೆ ಕುಲವನ್ನೇ ಪಾವನ ಮಾಡುವವನು ಬ್ರಹ್ಮಜ್ಞಾನಿಯು. ಅವನ ಆನಂದಕ್ಕೆ ಯಾವದೊಂದು ವಿಘ್ನವೂ ಆಗುವಂತಿಲ್ಲ, ಅವನ ಇಷ್ಟವು ಈಡೇರದೆ ಶೋಕವುಂಟಾಯಿತೆಂಬ ಸಂಭವವೇ ಒದಗುವದಿಲ್ಲ, ಅವನು ಧರ್ಮಾಧರ್ಮಗಳೆಂಬ ಪಾಪವನ್ನೇ ದಾಟಿಬಿಡುತ್ತಾನೆ; ಧರ್ಮವಾಗಲಿ ಅಧರ್ಮವಾಗಲಿ ಜನ್ಮಾಂತರ ಲೋಕಾಂತರಗಳನ್ನು ಕೊಡುವದರಿಂದ ಅವನ ದೃಷ್ಟಿಯಲ್ಲಿ ಎರಡೂ ಪಾಪವೇ ಆಗಿರುತ್ತದೆ. ಅಕರ್ತ್ರಾತ್ಮಜ್ಞಾನದಿಂದ ಅವನು ಈ ಎಲ್ಲಾ ಪಾಪವನ್ನೂ ದಾಟಿರುತ್ತಾನೆ. ಹೃದಯದಲ್ಲಿ ಗಂಟುಹಾಕಿಕೊಂಡಿರುವ ಅವಿದ್ಯಾಪ್ರತ್ಯಯಗಳೆಲ್ಲವನ್ನೂ ಬಿಡಿಸಿಕೊಂಡು ಅವನು ಅಮೃತಸ್ವರೂಪನಾಗುತ್ತಾನೆ.



# 23. ಉಪಸಂಹಾರ

ತದೇತದೃಚಾಭ್ಯುಕ್ತಮ್–

ಕ್ರಿಯಾವನ್ತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ
ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯನ್ತಃ ।
ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ
ಶಿರೋವ್ರತಂ ವಿಧಿವದ್ ಯೈಸ್ತು ಚೀರ್ಣಮ್ ॥10॥

ತದೇತತ್ ಸತ್ಯಮೃಷಿರಙ್ಗಿರಾಃ
ಪುರೋವಾಚ ನೈತದಚೀರ್ಣವ್ರತೋಽಧೀತೇ ।
ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ ॥ 11॥

*"ಇದನ್ನು ಋಕ್ಕಿನಲ್ಲಿ ಹೇಳಿರುತ್ತದೆ: ಯಾರು ಕ್ರಿಯಾವಂತರಾಗಿ ಶ್ರೋತ್ರಿಯರಾಗಿ ಬ್ರಹ್ಮನಿಷ್ಠರಾಗಿ ಏಕರ್ಷಿಯಲ್ಲಿ ಹೋಮವನ್ನು ಮಾಡುತ್ತಾ ಶ್ರದ್ಧಾವಂತರಾಗಿರುವರೋ, ಯಾರು ಶಿರೋವ್ರತವನ್ನು ವಿಧಿವತ್ತಾಗಿ ಮಾಡಿರುವರೋ ಅವರಿಗೇ ಈ ಬ್ರಹ್ಮವಿದ್ಯೆಯನ್ನು ಹೇಳಬೇಕು. ಈ ಸತ್ಯವನ್ನು ಅಂಗಿರಸನೆಂಬ ಋಷಿಯು ಪೂರ್ವದಲ್ಲಿ ಹೇಳಿದನು. ವ್ರತವನ್ನು ಆಚರಿಸದೆ ಇರುವವನು ಇದನ್ನು ಅಧ್ಯಯನಮಾಡತಕ್ಕದ್ದಲ್ಲ. ಪರಮಋಷಿಗಳಿಗೆ ನಮಸ್ಕಾರ, ಪರಮಋಷಿಗಳಿಗೆ ನಮಸ್ಕಾರ!"*

ಬ್ರಹ್ಮಸ್ವರೂಪವನ್ನೂ ಅದನ್ನರಿಯುವದಕ್ಕೆ ಬೇಕಾದ ಸಾಧನಗಳನ್ನೂ ಆ ಜ್ಞಾನದಿಂದುಂಟಾಗುವ ಫಲವನ್ನೂ ತಿಳಿಸಿದ್ದಾಯಿತು. ಈಗ ಇದನ್ನು ಯಾರಿಗೆ ಹೇಳಬೇಕೆಂಬ ವಿಷಯದಲ್ಲಿ ಎರಡು ಮಾತುಗಳನ್ನು ಹೇಳಿ ಉಪನಿಷತ್ತಿನ ವಿವರವನ್ನು ಉಪಸಂಹಾರಮಾಡಬಹುದಾಗಿದೆ.

ಈ ಬ್ರಹ್ಮವಿದ್ಯೆಯನ್ನು ಯಾರಿಗೆ ಹೇಳಬಹುದು?–ಎಂಬ ಪ್ರಶ್ನೆಗೆ ಉತ್ತರವನ್ನು ವೇದಮಂತ್ರದಲ್ಲಿ ಹೀಗೆಂದು ಹೇಳಿದೆ: ವೇದವನ್ನು ವಿಧಿಪೂರ್ವಕವಾಗಿ ಅಧ್ಯಯನ ಮಾಡಿ ಅದರಲ್ಲಿ ಹೇಳಿರುವಂತೆ ಕರ್ಮಗಳನ್ನು ಮಾಡಿರಬೇಕು. ಇದು ಅಥರ್ವವೇದಕ್ಕೆ ಸೇರಿರುವ ಉಪನಿಷತ್ತಾದ್ದರಿಂದ 'ಏಕರ್ಷಿ' ಎಂಬ ಹೆಸರಿನಿಂದ ಪ್ರಖ್ಯಾತನಾಗಿರುವ ಅಗ್ನಿಯನ್ನು ಹೋಮದಿಂದ ಆರಾಧಿಸಿರಬೇಕು. ತಲೆಯಮೇಲೆ ಅಗ್ನಿಯನ್ನು ಧಾರಣೆಮಾಡುವದೆಂಬ ಅಥರ್ವಣಿಕರ ಶಿರೋವ್ರತವನ್ನು ಮಾಡಿರಬೇಕು. ವೇದಾಧ್ಯಯನಗಳನ್ನೂ ಕರ್ಮಗಳನ್ನೂ ಮಾತ್ರ ಮಾಡಿದ್ದರೆ ಸಾಲದು. ವೇದಕ್ಕೆ ಗುರಿಯಾದ ಬ್ರಹ್ಮದ ಉಪಾಸನೆಯನ್ನು ಮಾಡುತ್ತಾ ಬ್ರಹ್ಮನಿಷ್ಠನೂ ಆಗಿರಬೇಕು.

ಅಂಥವರಿಗೆ ಮಾತ್ರ ಈ ಅಕ್ಷರವೆಂಬ ಪರಮಾರ್ಥಸತ್ಯವಾದ ಬ್ರಹ್ಮದ ಜ್ಞಾನವನ್ನು ಕೊಡಬೇಕು.

ಹೀಗೆ ಅಧಿಕಾರಿಯ ಲಕ್ಷಣಗಳೆಲ್ಲವನ್ನೂ ಹೊಂದಿ ಅಂತಃಕರಣಸಂಸ್ಕಾರದಿಂದ ಕೂಡಿ ತನ್ನಲ್ಲಿಗೆ ವಿಹಿತವಾದ ರೀತಿಯಿಂದ ಶಿಷ್ಯನಾಗಿ ಬಂದ ಶೌನಕನಿಗೆ ಈ ಪರಮಾರ್ಥಸತ್ಯವನ್ನು ಅಂಗಿರಸ್ಸೆಂಬ ಋಷಿಯು ತಿಳಿಸಿಕೊಟ್ಟನು. ಅದನ್ನೇ ಈ ಉಪನಿಷತ್ತಿನಲ್ಲಿ ತಿಳಿಸಿರುತ್ತದೆ. ಯಾವನು ಅಧಿಕಾರಿಯಾಗಿರುವನೋ ಯಾವನು ನಿಜವಾಗಿ ಮೋಕ್ಷವನ್ನೇ ಬಯಸಿ ವಿಧಿವತ್ತಾಗಿ ಶಿಷ್ಯಭಾವದಿಂದ ಗುರುವಿನ ಬಳಿಗೆ ಬರುವನೋ ಅಂಥವನಿಗೆ ಬ್ರಹ್ಮವಿದ್ಯೆಯನ್ನು ತಿಳಿಸಿಹೇಳುವದು ಆಚಾರ್ಯನ ಕರ್ತವ್ಯವು.

ಮುಂಡಕೋಪನಿಷತ್ತಿನ ಮೂಲವನ್ನು ಮಾತ್ರ, ಮೇಲೆ ಹೇಳಿದಂತೆ ಶಾಸ್ತ್ರೋಕ್ತವಾದ ವ್ರತವನ್ನು ಆಚರಿಸದೆ ಇರುವವನು ಓದಬಾರದು. ವ್ರತದಿಂದ ಸಂಸ್ಕೃತನಾದವನಿಗೇ ಈ ಉಪನಿಷತ್ತಿನಿಂದ ಜ್ಞಾನವುಂಟಾಗುತ್ತದೆ. ಆದರೆ ಇಷ್ಟುಮಾತ್ರದಿಂದ ಬ್ರಹ್ಮಜ್ಞಾನವೂ ಕರ್ಮದ ಅಂಗವೆಂದು ಭಾವಿಸಬಾರದು. ಯಾವನಿಗೆ ಈ ಜನ್ಮದಲ್ಲಾಗಲಿ ಹಿಂದಿನ ಜನ್ಮದಲ್ಲಾಗಲಿ ಮಾಡಿದ ಪುಣ್ಯಕರ್ಮಗಳಿಂದ ಚಿತ್ತಶುದ್ಧಿಯಾಗಿರುವದೋ, ಯಾವನಿಗೆ ಸೂಕ್ಷ್ಮವಸ್ತುವಿನಲ್ಲಿಯೇ ಮನಸ್ಸನ್ನು ಏಕಾಗ್ರವಾಗಿಡುವ ಶಕ್ತಿಯುಂಟಾಗಿರುವದೋ ಅಂಥವನಿಗೆ ಸದ್ಗುರುವಾದವನು ತತ್ತ್ವವನ್ನು ತಿಳಿಸಿಕೊಟ್ಟಮಾತ್ರದಿಂದ ಅವಶ್ಯವಾಗಿ ಜ್ಞಾನವು ಉಂಟಾಗಿಯೇ ತೀರುತ್ತದೆ. ಇದೂ ಅಲ್ಲದೆ ಇತಿಹಾಸಪುರಾಣಗಳನ್ನು ನಾಲ್ಕುವರ್ಣದವರೂ ಶ್ರವಣಮಾಡ ಬಹುದೆಂದು ಹೇಳಿರುವದರಿಂದ ಆ ಮೂಲಕವೂ ಜ್ಞಾನವುಂಟಾಗಬಹುದಾಗಿದೆ. ಯಾವ ರೀತಿಯಿಂದಲೇ ಆಗಲಿ ಜ್ಞಾನವುಂಟಾಗಿಬಿಟ್ಟರೆ ಜ್ಞಾನದ ಫಲವು ದೃಷ್ಟಫಲವಾದ್ದರಿಂದ ಅದು ಹುಟ್ಟಿಲ್ಲವೆಂದು ಹೇಳುವದಕ್ಕೆ ಯಾರಿಂದಲೂ ಆಗಲಾರದು. ಯಾರು ಯಾರು ನಮ್ಮೆಲ್ಲರ ಆತ್ಮನೇ ಆಗಿರುವ ಈ ಪರಬ್ರಹ್ಮವನ್ನು ಅರಿತುಕೊಳ್ಳುವರೋ ಅವರು ಋಷಿಗಳೇ ಆಗುವರು. ಅವರೆಲ್ಲರೂ ಪೂಜ್ಯರೇ.

ಪರಬ್ರಹ್ಮವನ್ನು ಮೊಟ್ಟಮೊದಲು ಕಂಡುಕೊಂಡವರು ಬ್ರಹ್ಮಾದಿಋಷಿಗಳೆಂದು ಈ ಉಪನಿಷತ್ತಿನ ಆದಿಯಲ್ಲಿಯೇ ಹೇಳಿರುತ್ತದೆ. ಪರಮಾರ್ಥಸತ್ಯವಾದ ಪರಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಂಡವರಾದ್ದರಿಂದ ಅವರು ಪರಮಋಷಿಗಳೆನಿಸುವರು. ಅಂಥ ಪರಮಋಷಿಗಳನ್ನು ಮುಮುಕ್ಷುವಾದವನು ನಿತ್ಯವೂ ಆದರದಿಂದ ಸ್ಮರಿಸುತ್ತಲೂ ನಮಸ್ಕರಿಸುತ್ತಲೂ ಇರಬೇಕು. ಅಂಥ ಗುರುಭಕ್ತಿಯೂ ಜ್ಞಾನಕ್ಕೆ ಒಂದು ದೊಡ್ಡ ಸಾಧನವಾಗುತ್ತದೆ.

ಪರಮಋಷಿಗಳಿಗೆ ನಮಸ್ಕಾರ!



7. ತೈತ್ತಿರಿಯೋಪನ್ಯಾಸಮಂಜರಿ : 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ 1999ನೆಯ ಸೆಪ್ಟೆಂಬರ್‌ನಿಂದ 2000ನೇ ಮೇ ಪೂರ, ಧಾರವಾಹಿಯಾಗಿ ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಪುಟ 1 ರಿಂದ 28ರವರೆಗೆ ಶ್ರೀಶ್ರೀಗಳವರೇ ಬರೆದಿಟ್ಟಿದ್ದ ಕೈ ಬರಹದ ಕರಡುಪ್ರತಿಯನ್ನು ಯಥಾವತ್ತಾಗಿ ಅಳವಡಿಸಿ ಅಲ್ಲಿಂದ ಮುಂದಕ್ಕೆ ಲೇಖಕರೇ ವಿವರಣೆಯನ್ನು ಬರೆದಿರುತ್ತಾರೆ (ಪ್ರಥಮ ಮುದ್ರಣ : 2000, ಪು.ಡೆಮ್ಮಿ 84)

8. ಐತರೇಯೋಪನ್ಯಾಸಮಂಜರಿ : 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ 2000ನೆ ಜೂನ್‌ನಿಂದ ಆಗಸ್ಟ್ ಪೂರ ಸಂಪಾದಕರು ಧಾರವಾಹಿಯಾಗಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಕೊನೆಯದಾಗಿ ಇದನ್ನು ಪ್ರಕಟಿಸಲಾಗಿದೆ. ವಿಷಯಗಳೆಲ್ಲವೂ ಶ್ರೀಶಾಂಕರಭಾಷ್ಯಾನುಗುಣವಾಗಿವೆ. ಜಿಜ್ಞಾಸುಗಳ ಅನುಕೂಲಕ್ಕಾಗಿ ಮಂತ್ರಗಳನ್ನೆಲ್ಲ ಒಟ್ಟುಗೊಡಿಸಿ ಗ್ರಂಥದ ಪ್ರಾರಂಭದಲ್ಲೆ ಮುದ್ರಿಸಲಾಗಿದೆ. ಜಿಜ್ಞಾಸುಗಳು ಅನುಸಂಧಾನ ಮಾಡಬೇಕಾದ ಗ್ರಂಥವಿದು. (ಪ್ರಥಮ ಮುದ್ರಣ : 2000, ಪು. ಡೆಮ್ಮಿ 36)

9. ಛಾಂದೋಗ್ಯೋಪನ್ಯಾಸಮಂಜರಿ : 1981ನೇ ಸೆಪ್ಟೆಂಬರ್‌ನಿಂದ 1987ನೇ ಆಗಸ್ಟ್ ಪೂರಾ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಂದುಗೂಡಿಸಿ ಗ್ರಂಥರೂಪವಾಗಿ ಮಾರ್ಪಡಿಸಿ ಮಂಜರಿಗಳ ಮಾಲೆಯಲ್ಲಿ ಪ್ರಕಟಿಸಲಾಗಿದೆ. ವಿಷಯಗಳೆಲ್ಲವೂ ಶ್ರೀಶಾಂಕರಭಾಷ್ಯಾನುಗುಣವಾಗಿವೆ. ಪ್ರತಿಪಾದನ ಸರಣಿಯು ಸರಳವಾಗಿದ್ದು ವೇದಾಂತಸಿದ್ಧಾಂತದಲ್ಲಿನ ಉಪಾಸನೆ ಹಾಗೂ ತತ್ತ್ವಜ್ಞಾನಗಳ ತಿರುಳನ್ನು ಒಳಗೊಂಡಿದೆ. ಜಿಜ್ಞಾಸುಗಳು ಈ ಗ್ರಂಥವನ್ನು ಪಠನಮಾಡುವದರಿಂದ ಛಾಂದೋಗ್ಯೋಪನಿಷತ್ತಿನ ಸಾರವನ್ನು ಅನುಸಂಧಾನ ಮಾಡಿ ಕೃತಾರ್ಥರಾಗಬಹುದಾಗಿದೆ.

(ಪ್ರಥಮ ಮುದ್ರಣ : 1999, ಪು. ಡೆಮ್ಮಿ 338)

10. ಬೃಹದಾರಣ್ಯಕೋಪನ್ಯಾಸಮಂಜರಿ : 1975 ನೇ ಸೆಪ್ಟೆಂಬರ್‌ನಿಂದ 1981ನೇ ಆಗಸ್ಟ್ ಪೂರಾ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥರೂಪವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಉಪನಿಷತ್ತುಗಳಲ್ಲೆಲ್ಲ ದೊಡ್ಡದಾದ ಬೃಹದಾರಣ್ಯಕದ ಶಾಂಕರಭಾಷ್ಯವೂ ವಿಸ್ತಾರವಾಗಿಯೇ ಇದೆ. ಅದರ ಸಾರಸಂಗ್ರಹವೇ ಈ ಗ್ರಂಥವಾಗಿದೆ. ಜಿಜ್ಞಾಸುಗಳು ಅತ್ಯವಶ್ಯವಾಗಿ ಅಧ್ಯಯನ ಮಾಡಿ ಅನುಸಂಧಾನಮಾಡಬೇಕಾದ ಗ್ರಂಥವಿದು.

(ದ್ವಿತೀಯ ಮುದ್ರಣ : 2009, ಪು. ಡೆಮ್ಮಿ 360)

11. ಶ್ವೇತಾಶ್ವತರೋಪನ್ಯಾಸಮಂಜರಿ : 1981 ನೇ ಸೆಪ್ಟೆಂಬರ್‌ನಿಂದ 1987ನೇ ಮಾರ್ಚ್ ಪೂರಾ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ಸಂಪಾದಕರು ಈ ಉಪನಿಷತ್ತಿನ ಮುಖ್ಯೋಪದೇಶಗಳನ್ನು ಸಂಗ್ರಹಿಸಿ ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥರೂಪವಾಗಿ ಪರಿವರ್ತಿಸಿ ಮಂಜರಿಗಳ ಮಾಲೆಯಲ್ಲಿ ಈಗ ಪ್ರಕಟಿಸಲಾಗಿದೆ. ಶ್ರೀಶಂಕರಾಚಾರ್ಯರು ದಶೋಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿದಂತೆ ಶ್ವೇತಾಶ್ವತರೋಪನಿಷತ್ತಿಗೆ ಭಾಷ್ಯ ರಚಿಸದಿದ್ದರೂ ಈ ಉಪನಿಷತ್ತಿನ ಅನೇಕ ಮಂತ್ರಗಳನ್ನು ತಮ್ಮ ಗ್ರಂಥಗಳಲ್ಲಿ ಪ್ರಮಾಣವಚನಗಳಾಗಿ ಉದಾಹರಿಸಿರುತ್ತಾರೆ. ಜಿಜ್ಞಾಸುಗಳ ಅನುಕೂಲಕ್ಕಾಗಿ ಮಂತ್ರಗಳನ್ನೆಲ್ಲ ಒಟ್ಟುಗೂಡಿಸಿ ಕೊನೆಯಲ್ಲಿ ಮುದ್ರಿಸಲಾಗಿದೆ. ಜಿಜ್ಞಾಸುಗಳು ಅತ್ಯವಶ್ಯಕವಾಗಿ ಅಧ್ಯಯನಮಾಡಿ ಅನುಸಂಧಾನಮಾಡಬೇಕಾದ ಗ್ರಂಥವಿದು. (ಪ್ರಥಮ ಮುದ್ರಣ : 1997, ಪು. ಡೆಮ್ಮಿ 354)

# ಸಂಸ್ಥಾಪಕರ ಸ್ಮರಣೆ

ವೇದಧರ್ಮದ ಪುನರುತ್ಥಾನ ಮತ್ತು ವೇದಾಂತಕ್ಕೊಂದು ನವಚೇತನ ತುಂಬಿದ ಮಹತ್ಕಾರ್ಯ ಸರ್ವದಾ ಸ್ಮರಣೀಯರಾದ ಶ್ರೀ ಶಂಕರಭಗವತ್ಪಾದರು. ಬ್ರಹ್ಮೀಭೂತ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು (ಪೂರ್ವಾಶ್ರಮದ ಶ್ರೀಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮರು - ವೈ. ಸುಬ್ಬರಾಯರು, ಜನನ 5.1.1880), ಶ್ರೀ ಶಂಕರವೇದಾಂತ ಸರಣಿಯಿಂದ ಆಕರ್ಷಿತರಾಗಿ, ಆಳವಾದ ಅಧ್ಯಯನ, ಚಿಂತನ ಮಂಥನಗಳಿಂದ, ತಮ್ಮ ವಿಶಿಷ್ಟ ಸಂಶೋಧನಾ ಪ್ರವೃತ್ತಿಯನ್ನು ಬಳಸಿ, ಶಂಕರರ ಅಮೋಘವಾದ ಪ್ರಸ್ಥಾನತ್ರಯ ಭಾಷ್ಯಗಳಿಗೆ ಹತ್ತಿದ್ದ ಕೊಳೆಯನ್ನು, ಮುತ್ತಿದ್ದ ಧೂಳನ್ನು ತೊಡೆದು ಶಾಂಕರವೇದಾಂತದ ನೈಜ ತಿರುಳನ್ನು ಕಂಡುಕೊಂಡರು. ಶಾಂಕರ ವೇದಾಂತಕ್ಕೆ 20ನೇ ಶತಮಾನದ ಅಧಿಕೃತ ವಕ್ತಾರರಾದರು, ಪ್ರತಿಪಾದಕರಾದರು, ಅಭಿನವಶಂಕರರಾದರು.

'ಬೆಳಿಗ್ಗೆ ಎದ್ದಾಗಿನಿಂದ ಮಲಗುವವರೆಗೂ ಹಾಗೂ ಹುಟ್ಟಿನಿಂದ ಬದುಕಿರುವವರೆಗೂ ವೇದಾಂತ ಚಿಂತನೆಯಿಂದಲೇ ಕಾಲವನ್ನು ಕಳೆಯಬೇಕು' ಎಂಬ ಅಭಿಯುಕ್ತರ ವಚನಕ್ಕೆ ಪ್ರತ್ಯಕ್ಷ ಉದಾಹರಣೆಯಾಗಿದ್ದ ಶ್ರೀ ಶ್ರೀಗಳವರು ತಮ್ಮ ಬಾಲ್ಯದಿಂದ 96ನೆಯ ವಯಸ್ಸಿನವರೆಗೂ ವೇದಾಂತಗ್ರಂಥ ಪಠನ, ಚಿಂತನ, ಪ್ರವಚನ, ಲೇಖನಗಳಲ್ಲಿ ತತ್ಪರರಾಗಿದ್ದು ಪುರುಷ ಸರಸ್ವತಿ ಎಂಬ ಅನ್ವರ್ಥನಾಮವನ್ನು ಹೊಂದಿದ್ದರು. ಅವರ ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳ ಇನ್ನೂರಕ್ಕೂ ಮೀರಿದ ಕೃತಿಗಳು ವೇದಾಂತ ಪ್ರಪಂಚದಲ್ಲಿ ಅವರನ್ನು ಅಮರರನ್ನಾಗಿಸಿವೆ. ಸಂಸ್ಕೃತ ಬಾರದ ಅಧ್ಯಾತ್ಮವಿಚಾರದ ಜಿಜ್ಞಾಸುಗಳಿಗೆ ಒಂದು ವರಪ್ರದಾನವಾಗಿದೆ.

ಶಾಲಾ ಉಪಾಧ್ಯಾಯರಾಗಿ ಸೇವೆ ಸಲ್ಲಿಸುವಾಗಲೇ ಅಧ್ಯಾತ್ಮ ಒಲವಿನಿಂದ ಸಂಸ್ಕೃತ ಕಲಿತು ಸಾಧಕರಾದರು. ಆ ಸಮಯದಲ್ಲಿ ಶ್ರೀ ಹೊಸಕೆರೆ ಚಿದಂಬರಯ್ಯನವರ, ಶ್ರೀ ಮಹಾಭಾಗವತರ ಸಂಪರ್ಕ, ಅಧ್ಯಾತ್ಮಬಾಂಧವ್ಯ, ಆತ್ಮೀಯತೇ, ಅನಂತರ ಶ್ರೀ ಗೋಂದಾವಳಿ ಮಹಾರಾಜರಲ್ಲಿ ಶ್ರೀ ರಾಮತಾರಕಮಂತ್ರೋಪದೇಶ, ಶೃಂಗೇರಿ ಜಗದ್ಗುರುಗಳಾದ ಶ್ರೀ ಸಚ್ಚಿದಾನಂದ ಶಿವಾಭಿನವನೃಸಿಂಹಭಾರತೀಮಹಾಸ್ವಾಮಿಗಳವರಿಂದ ಭಾಷ್ಯಶಾಂತಿಪಾಠಗಳು ಅವರ ಶ್ರದ್ಧಾಕಾರ್ಯತತ್ಪರತೆಗೆ ಮೆರಗನ್ನು ನೀಡಿದವು.

1937ರಲ್ಲಿ ಹೊಳೆನರಸೀಪುರದಲ್ಲಿ ನೆಲೆಸಿದ ಮೇಲೆ ತಮ್ಮನ್ನು ಪೂರ್ಣವಾಗಿ ಶಾಂಕರ ವೇದಾಂತಕ್ಕೆ ಅರ್ಪಿಸಿಕೊಂಡರು. 1948ರಲ್ಲಿ ಸಂನ್ಯಾಸಸ್ವೀಕಾರ ಮಾಡಿದರು. ಶುದ್ಧತತ್ತ್ವಾನ್ವೇಷಣೆ, ನಿಖರವಾದ ಬರವಣಿಗೆ, ಆಚಾರನಿಷ್ಠೆ ಮತ್ತು ಕಠೋರನಿಯಮಪಾಲನೆಗೆ ಶ್ರೀ ಶ್ರೀಗಳವರು ಹೆಸರಾದವರು. ಅವರು ಸ್ಥಾಪಿಸಿರುವ (1920) ಅಧ್ಯಾತ್ಮಪ್ರಕಾಶ ಕಾರ್ಯಾಲಯವು ಈಗಲೂ ನಿಜವಾದ ಅಧ್ಯಾತ್ಮವಿದ್ಯಾಪ್ರಸಾರ ಕೇಂದ್ರವಾಗಿದೆ.

ಪೂಜ್ಯರು 1975ನೇ ಆಗಸ್ಟ್ 5ರಂದು ಬ್ರಹ್ಮೀಭೂತರಾದರು. ಇವರ ಮಹಾಸಮಾಧಿ ಪೀಠವು ಹೊಳೆನರಸೀಪುರದಲ್ಲಿದೆ. ಇಂದಿಗೂ ಚೈತನ್ಯಸ್ವರೂಪಿಗಳಾಗಿ ಕಾ ಶಕ್ತಿಯಾಗಿದ್ದಾರೆ.

ಈಚೆಗೆ 28.07.2008ರಂದು ಪ್ರತಿಷ್ಠೆಗೊಂಡ ಶ್ರೀ ಶ್ರೀಗಳವರ ಹೊಳೆನರಸೀಪುರದ ಸಮಾಧಿ ಮಂದಿರದಲ್ಲಿ ರಾರಾಜಿಸುತ್ತಿದೆ.







ಬ್ರಹ್ಮನಿಷ್ಠಾಯ ವಿದ್ಮಹೇ ಸಂಯಮೀಂದ್ರಾಯ ಧೀಮಹಿ ।
ತನ್ನಃ ಸಚ್ಚಿದಾನಂದಃ ಪ್ರಚೋದಯಾತ್ ॥